

ಇನ್ನೂ ದಯಬಾರದೇ ದಾಸನ ಮೇಲೆ
ಇನ್ನೂ ದಯಬಾರದೇ
ಪನ್ನಗ ಶಯನ ಪಾಲ್ಗಡಲೊಡೆಯ ಕೃಷ್ಣ -ಪ-

ನಾನಾದೇಶಗಳಲ್ಲಿ ನಾನಾ ಕಾಲಗಳಲ್ಲಿ
ನಾನಾ ಯೋನಿಗಳಲ್ಲಿ ಮಡಿದು ಪುಟ್ಟಿ
ನಾನು ನನ್ನದು ಎಂಬ ನರಕ ದೊಳು ಬಿದ್ದು
ನೀನೆ ಗತಿಯೆಂದು ನಂಬಿದ ದಾಸನ ಮೇಲೆ -೧-

ಕಾಮಾದಿ ಷಡ್ವರ್ಗ ಗಾಢಾಂಧಕಾರದಿ
ಪಾಮರನಾಗಿಹ ಘಾತಕಿಯು
ಮಾಮನೋಹರನೆ ಚಿತ್ತಜನಯ್ಯನೆ
ನಾಮವೆ ಗತಿಯೆಂದು ನಂಬಿದ ದಾಸನ ಮೇಲೆ -೨-

ಮನಸಾ ವಾಚಾ ಕಾಯಾ ಮಾಳ್ಪಕರ್ಮವು
ದಾಸವಾಂತಕ ನಿನ್ನಾಧೀನವಲ್ಲೆ
ಏನು ಮಾಡಿದರೇನು ಪ್ರಾಣ ನಿನ್ನದು ಸ್ವಾಮಿ
ಶ್ರೀನಾಥ ಪುರಂದರವಿಠಲ ದಾಸನ ಮೇಲೆ -೩-

--ಶ್ರೀ ಪುರಂದರದಾಸರು.

ಸಂದರ್ಶಿಸಿ. ಆನಂದಿಸಿ.

# ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ
# ತಿರುಪತಿ

## ವಾರ್ಷಿಕ ತೆಪ್ಪೋತ್ಸವ

**2--1--96 ರಿಂದ 4--1--96 ವರೆಗೆ**

| | | |
|---|---|---|
| 2--1--96 | ಮಂಗಳವಾರ | ಶ್ರೀ ವಿಘ್ನೇಶ್ವರ, ಚಂದ್ರಶೇಖರಸ್ವಾಮಿ ತೆಪ್ಪೋತ್ಸವ |
| 3--1--96 | ಬುಧವಾರ | ಶ್ರೀ ಸುಬ್ರಹ್ಮಣ್ಯಸ್ವಾಮಿ ತೆಪ್ಪೋತ್ಸವ |
| 4--1--96 | ಗುರುವಾರ | ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ |

ಧನುರ್ಮಾಸದ ಈ ತೆಪ್ಪೋತ್ಸವಗಳು ನಯನಾನಂದಕರ ಹಾಗೂ ಆತ್ಮ ತೃಪ್ತಿಕರ. ತಾವೂ ಬನ್ನಿ, ತಮ್ಮವರನ್ನೂ ಕರೆತನ್ನಿ. ವಿದ್ಯುದ್ದೀಪ ಕಾಂತಿಯಲ್ಲಿ ಸಾಂಪ್ರದಾಯಕ ಮಂತ್ರ ಘೋಷಗಳ ನಡುವೆ ನಡೆಯುವ ತೆಪ್ಪೋತ್ಸವಗಳನ್ನು ವೀಕ್ಷಿಸಿರಿ.

**ನೀವೂ ಬನ್ನಿ. ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ.**

---

ಸಂದರ್ಶಿಸಿ. ಆನಂದಿಸಿ.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ
# ತಿರುಪತಿ

## ವಾರ್ಷಿಕ ತೆಪ್ಪೋತ್ಸವ

**31--1--96 ರಿಂದ 4--2--96 ವರೆಗೆ**

| | | |
|---|---|---|
| 31--1--96 | ಬುಧವಾರ | ಶ್ರೀ ಕೋದಂಡರಾಮಸ್ವಾಮಿ ತೆಪ್ಪೋತ್ಸವ. |
| 1--2--96 | ಗುರುವಾರ | ಶ್ರೀಕೃಷ್ಣ, ಆಂಡಾಳ್ ಅಮ್ಮನವರ ತೆಪ್ಪೋತ್ಸವ. |
| 2--2--96 | ಶುಕ್ರವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ. |
| 3--2--96 | ಶನಿವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ. |
| 4--2--96 | ಭಾನುವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ. |

ಮಾಘ ಪೂರ್ಣಿಮೆಯ ಆಚೀಚಿನ ದಿನಗಳಲ್ಲಿ ನಡೆಯುವ ತೆಪ್ಪೋತ್ಸವಗಳು ನಯನಾನಂದಕರ. ತಿರುಪತಿಯ ರೈಲ್ವೆ ಸ್ಟೇಷನ್ ಬಳಿಯ ಶ್ರೀ ಗೋವಿಂದರಾಜಸ್ವಾಮಿ ಆಲಯದ ಪುಷ್ಕರಿಣಿಯಲ್ಲಿ ನಡೆಯುವ ತೆಪ್ಪೋತ್ಸವಗಳು ಅತ್ಯಂತ ವರ್ಣಾಲಂಕೃತ, ಮನೋಹರವಾಗಿರುತ್ತವೆ. ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ.

**ತಿ. ತಿ. ದೇ.**



ಗೌರವ ಸಂಪಾದಕರು :
ಎನ್. ರಮೇಶ್‌ಕುಮಾರ್ ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ :
ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :
ಪಿ. ಮೋಹನ್ ರಾವ್

ಲೇಖನ/ಜಾಹೀರಾತುಗಳಿಗೆ
ಮಿಕ್ಕವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು

ಬಿಡಿ ಪ್ರತಿ ೨--೦೦

ವಾರ್ಷಿಕ ಚಂದಾ ೨೪--೦೦



ಸಂಪುಟ -- 26 ನವಂಬರ್ 1995 ಸಂಚಿಕೆ --6

# ವಿಷಯಸೂಚಿ



ಮುಖ ಚಿತ್ರ: ಶ್ರೀ ಮಣವಾಳ ಮಾಮುನಿ - ಚಿತ್ರ - ಕೆ. ಜಗದೀಶ್.

ಹಿಂಬದಿಯಲ್ಲಿ: ನಾರಾಯಣವನದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ಆಲಯ.

ಒಳಗಡೆ: 1) ಭೂದತ್ತಾಳ್ವಾರ್.
2) ಪೇಯಾಳ್ವಾರ್.

ಮಧ್ಯವಿಸ್ತೃತಿ: 1) ಕೊಲ್ಲಾಪುರ ಶ್ರೀ ಮಹಾಲಕ್ಷ್ಮಿ ಅಮ್ಮನವರು.
2) ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರು.




ಅಭೀಷ್ಟದಾನೇ ಭಕ್ತಾನಾಂ ಕಲ್ಪವೃಕ್ಷಾಯಿತಾರಮಾ
ಚಿಂತಾಮಣಿ ಕಾಮಧೇನು ಕರುಣಾ ಸಾಗರಾಯಿತಾ

ಸರ್ವಲೋಕ ಪಾಲಕಿಯಾದ ಅಲಮೇಲು ಮಂಗಮ್ಮ ಭಕ್ತರ ಪಾಲಿನ ಕಲ್ಪವೃಕ್ಷ ಒಲ್ಮೆಸುವವರ ಕೋರಿಕೆಗಳನ್ನು ತೀರಿಸುವ ಕಾಮಧೇನು. ಅಪಾರ ಕರುಣಾಮಯಿ.

ತಿರುಚಾನೂರಿನ ಪದ್ಮಸರೋವರದಲ್ಲಿ ಕಾರ್ತೀಕ ಪಂಚಮಿ ದಿನದಂದು ಪದ್ಮನೇತ್ರಳಾಗಿ, ಪದ್ಮಸುಗಂಧ ಗಾತ್ರಳಾಗಿ ಆವಿರ್ಭವಿಸಿದ ಆ ಮಹಾಲಕ್ಷ್ಮಿ ಶ್ರೀ ವೆಂಕಟೇಶ್ವರನ ಪಟ್ಟದ ರಾಣಿಯಾಗಿ ಮೆರೆದಳು, ಸ್ವಾಮಿ ವಕ್ಷಸ್ಥಲವಾಸಿಯಾಗಿ ನಿಂತಳು.

ಸುಲಭಳೂ, ಶಕ್ತಳೂ, ಆದ ಆಕೆಯನ್ನು ನೆನೆದರೆ ಸಾಕು ಕಷ್ಟಗಳು ಕರಗಿ ಇಷ್ಟಗಳು ಈಡೇರುತ್ತವೆ. ಆಶ್ರಯಿಸಿದರೆ, ಕೇಳದಿದ್ದರೂ ದೊರೆಯುತ್ತದೆ ಜೀವನ್ಮುಕ್ತಿ.

ಶ್ರೀ ಪದ್ಮಾವತೀ ಅಮ್ಮನವರನ್ನು ನೋಡದೆ ಹಿಂದಿರುಗಿದರೆ ತಿರುಮಲೆಯ ಯಾತ್ರೆ ಪೂರ್ಣವಾಗುವುದಿಲ್ಲವೆಂಬುದು ಅನಾದಿಯಿಂದ ಭಕ್ತರಲ್ಲಿರುವ ನಂಬಿಕೆ.

ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವಗಳು ಈ ಕಾರ್ತೀಕ ಮಾಸದಲ್ಲಿ ನವಂಬರ್ 19 ರಿಂದ 27ರ ವರೆಗೆ ಕಣ್ಣಿಗೆ ಹಬ್ಬವಾಗುವಂತೆ ಸಕಲ ವೈಭವದಿಂದ ನಡೆಯುತ್ತವೆ.

ಆ ದಯಾದೇವಿಗೆ ನಡೆಯುವ ಉತ್ಸವಗಳನ್ನು ದರ್ಶಿಸಲು ದೇಶದ ಹಲವು ಹತ್ತು ಊರುಗಳಿಂದ ಬರುವ ಭಕ್ತರಿಗಾಗಿ ಎಲ್ಲ ಸೌಕರ್ಯಗಳನ್ನೂ ಸಿದ್ಧಗೊಳಿಸಿದೆ ತಿ. ತಿ. ದೇವಸ್ಥಾನ.

ತಿರುಮಲೆಯ ಸ್ವಾಮಿಯ ಬ್ರಹ್ಮೋತ್ಸವಗಳು ಈ ನಡುವೆಯೇ ಸಂಪನ್ನವಾಗಿವೆ. ಆ ಬ್ರಹ್ಮೋತ್ಸವಗಳ ಮಾದರಿಯಲ್ಲಿಯೇ ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವಕ್ಕೂ ವಾಹನ ಸೌಕರ್ಯದಿಂದ ಆರಂಭಿಸಿ ವಸತಿ ಸೌಲಭ್ಯದ ವರೆಗೆ ಎಲ್ಲ ವಿಷಯದಲ್ಲೂ ಅತ್ಯಂತ ಶ್ರದ್ಧೆಯಿಂದ ಏರ್ಪಾಡುಗಳನ್ನು ಮಾಡಲಾಗಿದೆ.

ಅನ್ನಮಯ್ಯನೇ ಮೊದಲಾದ ಹರಿದಾಸರನ್ನು ಆದರಿಸಿದ ತಾಯಿ, ಆರ್ತಿಯಿಂದ ಕರೆವವರ ಅಂಗೈಯ ಮಾಣಿಕ್ಯವಾದ ಕಲ್ಪವಲ್ಲಿ ಶ್ರೀ ಪದ್ಮಾವತೀದೇವಿ.

ಹೃದಯದಲ್ಲಿ ಭಕ್ತಿ ಭಾವ, ಕಣ್ಣಿನಲ್ಲಿ ಕಾರ್ತೀಕ ದೀಪ ಹಚ್ಚಿಕೊಂಡು ಕಾಣಬೇಕಾದ, ಕಂಡು ಜನ್ಮಸಾರ್ಥಕ್ಯ ಹೊಂದಬೇಕಾದ ಆ ತಾಯಿಯ ಬ್ರಹ್ಮೋತ್ಸವಗಳನ್ನು ನೋಡಲು ದೇವತೆಗಳೂ ಬರುತ್ತಾರೆ. ನಾವೂ ಪಾಲುಗೊಳ್ಳುವ ಬನ್ನಿ;

ಕ್ಷೀರಾಬ್ಧಿ ಕನ್ನಿಕೆಗೆ, ಶ್ರೀ ಮಹಾಲಕ್ಷ್ಮಿಗೆ
ನೀರಜಾಲಯೆಗೆ ನೀರಾಜನವೆನ್ನಿ

**ಎನ್. ರಮೇಶಕುಮಾರ್,**

ಗೌರವ ಸಂಪಾದಕರು / ಕಾರ್ಯನಿರ್ವಹಣಾಧಿಕಾರಿ,

ತಿ. ತಿ. ದೇ., ತಿರುಪತಿ.

# ಶ್ರೀ ವಿಷ್ಣು ಸಹಸ್ರನಾಮ

—ವಿದ್ವಾನ್ 'ರಘುಸುತ'.

## ನಾಮ ಸಂಕೀರ್ತನೆ :

'ಭಗವನ್ನಾಮ ಸಂಕೀರ್ತನೆ'ಯು ಪ್ರತಿಯೊಬ್ಬ ಭಾರತೀಯನಿಗೂ ಅತ್ಯಗತ್ಯವಾಗಿರುವ ಜೀವನದ ಒಂದು ಅಂಗ (ಅಂಶ) ವಾಗಿರುತ್ತದೆ. ಸಂಕೀರ್ತನೆ ಎನ್ನುವ ಶಬ್ದದ ವ್ಯಾಪಕ ಅರ್ಥದಲ್ಲಿ 'ಸಮ್ಯಕ್ ರೀತ್ಯಾ ನಾಮ, ಗುಣ, ಲೀಲಾ, ಯಶೋವರ್ಣನೆ'ಗಳು ಸೇರಿರುತ್ತವೆ.

ಶಾಸ್ತ್ರಗಳಲ್ಲಿ ನಿರ್ದಿಷ್ಟವಾದ ಅಥ ವಾ ಪಠಿತ ಎಲ್ಲ ಅಷ್ಟಾವಿಂಶತಿ ನಾಮ, ಅಷ್ಟೋತ್ತರ ಶತ ನಾಮ, ನಾಮ ತ್ರಿಶತಿ ಹಾಗೂ ಸಹಸ್ರನಾಮಗಳು ಭಗವಂತನ ಹೆಸರು, ಗುಣ, ಯಶ ಹಾಗೂ ಲೀಲೆಗಳ ವರ್ಣನೆಯನ್ನು ನೀಡುತ್ತವೆ. ಫಲತಃ ಈ ಸಹಸ್ರ ನಾಮ ಹಾಗೂ ಶತನಾಮಗಳು ಸಂಕೀರ್ತನೋಪಯೋಗಿ, ವಿಶೇಷವಾಗಿ ಏಕಾಂತಿಕ ಸಂಕೀರ್ತನಕ್ಕಾಗಿ ಉಪಯೋಗವಾಗುತ್ತವೆ.

ಸಂಕೀರ್ತನಮಯವಾಗಿರುವ ಸಾಮವೇದದ (ಅನುಷ್ಟುಪ್ ಛಂದಸ್) ಸ್ತುತಿ ಪರಂಪರೆಯಲ್ಲಿ, ಇತಿಹಾಸ ಪುರಾಣಗಳಲ್ಲಿ ಹಾಗೂ ಶಾಕ್ತ ಪ್ರಮೋದ ಇತ್ಯಾದಿ ಗ್ರಂಥಗಳಲ್ಲಿ ಭಗವಂತನ ನೂರಾರು ಶ್ರೇಷ್ಠ ನಾಮ ದ್ವಾದಶೀ, ದ್ವಾತ್ರಿಂಶತ್ ನಾಮ, ಶತನಾಮ, ನಾಮತ್ರಿಶತೀ, ಸಹಸ್ರನಾಮ ಸ್ತೋತ್ರಗಳು) ನಿಬದ್ಧವಾಗಿವೆ. ನೃಸಿಂಹತಾಪನೀ ಉಪನಿಷತ್‌ನ ಮೂಲ ಹಾಗೂ ಶಂಕರ ಭಾಷ್ಯಗಳಲ್ಲಿ ಈ ಪರಂಪರೆಯ ಮಹಾಮಹಿಮೆ ವರ್ಣಿತವಾಗಿದೆ.

ಎಲ್ಲ ಶತನಾಮ ಹಾಗೂ ಸಹಸ್ರನಾಮಗಳ ಆದಿ ಅಂತ್ಯದಲ್ಲಿ ಪ್ರಾಯಃ 'ಇತಿ ನಾಮ ಸಹಸ್ರಂ ತೇ ವೃಷಭಧ್ವಜ ಕೀರ್ತಿತಮ್' (ಗರುಡಪುರಾಣ ೧೫/೧೬೯) ಹಾಗೂ 'ಇತೀದಂ ಕೀರ್ತನೀಯಸ್ಯ ಕೇಶವಸ್ಯ ಪ್ರಕೀರ್ತಿತಮ್', ಯದ್ಯಪಿ ಪರಿಕೀರ್ತಯೇತ್', 'ಕಲೌತು ಕೀರ್ತನೇನೈವ ಸರ್ವಂ ಪಾಪಂ ವ್ಯಪೋಹತಿ' ಇತ್ಯಾದಿಗಳಲ್ಲಿ ಸಂಕೀರ್ತನೆಯ ಉಪಯೋಗವನ್ನು ಸೂಚಿಸಿರುವುದೇ ಅಲ್ಲದೆ ಅವುಗಳ ವಿಧಿ, ಪ್ರದ್ಯುಷ್ಟ ಇತ್ಯಾದಿಗಳೂ ನಿರೂಪಿತವಾಗಿವೆ. ಅಲ್ಲದೆ ಇತರೇ ವ್ಯಾಖ್ಯಾನಗಳಲ್ಲೂ ಕೀರ್ತನೆ, ಜಪ, ಪಾಠ ಇತ್ಯಾದಿಗಳ ಸರ್ವತ್ರ ಸಮಾನ ಉಪಯೋಗವನ್ನು ಸೂಚಿಸಲಾಗಿದೆ.

ಸಹಸ್ರ ನಾಮಗಳಲ್ಲಿ ವಿಷ್ಣು, ಶಿವ, ರಾಮ, ಕೃಷ್ಣ ಇತ್ಯಾದಿ ಬೇರೆ ಬೇರೆ ದೇವರುಗಳ ಬೇರೆ ಬೇರೆ ಸಹಸ್ರನಾಮಗಳಿವೆ. ನಾವು ಪೂಜಿಸುವ ದೇವಿಯರ (ಲಕ್ಷ್ಮಿ ಇತ್ಯಾದಿ) ಸಹಸ್ರ ನಾಮಗಳೂ ಇವೆ.

## ಭೀಷ್ಮಪ್ರೋಕ್ತವಾದುದು :

ಇವುಗಳಲ್ಲೆಲ್ಲ ಅತಿ ಪ್ರಾಚೀನವಾದುದು ವಿಷ್ಣು ಸಹಸ್ರನಾಮ. ನಾಲ್ಕು ರೀತಿಯ ವಿಷ್ಣು ಸಹಸ್ರನಾಮಗಳಿದ್ದರೂ, ಮಹಾಭಾರತದಲ್ಲಿ ಭೀಷ್ಮ ಪ್ರೋಕ್ತ ಶ್ರೀ ವಿಷ್ಣು ಸಹಸ್ರನಾಮವು ಅತ್ಯಂತ ಜನಪ್ರಿಯವೂ, ವಿಶೇಷ ರೀತಿಯಲ್ಲಿ ಪ್ರಸಿದ್ಧಿ ಪಡೆದಿರುವುದೂ ಆಗಿದೆ. ಇದು ಎಷ್ಟೊಂದು ಜನಪ್ರಿಯವೆಂದರೆ, ವಿಷ್ಣು ಸಹಸ್ರನಾಮವೆಂದರೆ ಇದೊಂದೇ ಎಂಬ ಭಾವನೆಯು ಬಹಳಷ್ಟು ಜನರಲ್ಲಿ ಹರಡಿದೆ. ಉಳಿದ ಮೂರು ವಿಷ್ಣು ಸಹಸ್ರನಾಮಗಳು ಭೀಷ್ಮಪ್ರೋಕ್ತದ ಅಪಾರ ಬೆಳಕಿನ ಎದುರು ಮಂಕಾಗಿವೆ. ಈ ಸಹಸ್ರನಾಮವು ಮಹಾಭಾರತದೊಂದಿಗೆ ದ್ವಾಪರದ ಅಂತ್ಯದಲ್ಲಿ ನಿರ್ಮಾಣವಾದುದು ಎಂಬ ನಂಬಿಕೆ.



## ಪದ್ಮಪುರಾಣೋಕ್ತ :

ಆದರೆ ಇಷ್ಟೇ ಪ್ರಸಿದ್ಧವಾದ, ಪ್ರಾಚೀನವಾದ, ಅನುಪಮವಾದ ಮತ್ತೊಂದು ವಿಷ್ಣು ಸಹಸ್ರನಾಮವೂ ಇದೆ. ಪದ್ಮಪುರಾಣದ ಉತ್ತರ ಖಂಡದಲ್ಲಿ ವಿಶೇಷ ಮಹತ್ವವನ್ನು ಹೊಂದಿರುವ ಈ ವಿಷ್ಣು ಸಹಸ್ರನಾಮವು ವರ್ಣಿತವಾಗಿದೆ. ಭೀಷ್ಮಪ್ರೋಕ್ತದ ವಿಷ್ಣು ಸಹಸ್ರನಾಮಕ್ಕಿಂತ ಇದು ಪ್ರಾಚೀನವಾದುದು. ಪಾಂಚರಾತ್ರ ಆಗಮಗಳು ಹಾಗೂ ಶಾಕ್ತಪ್ರಮೋದದ ಅಂತ್ಯದಲ್ಲಿ ಇದೇ ರೂಪದಲ್ಲಿ ಕಂಡುಬರುವುದರಿಂದ ಬಹಳ ಪ್ರಾಚೀನವಾದುದೆಂದು ನಂಬಲಾಗಿದೆ. ಇದನ್ನು ಪಾರ್ವತಿಗಾಗಿ ಶಿವನು ಉಪದೇಶಿಸಿದನು. ಅಲ್ಲದೆ ಇದು ಅಗಸ್ತ್ಯ ಸಂಹಿತೆ ಹಾಗೂ ಪ್ರಾಚೀನ ಪುರಾಣಗಳಲ್ಲೂ ದೊರೆಯುತ್ತದೆ. ಆದುದರಿಂದ ಪದ್ಮಪುರಾಣೋಕ್ತ ಈ ವಿಷ್ಣು ಸಹಸ್ರನಾಮದ ಪ್ರಚಾರಕ್ಕಾಗಿ ಹಿಂದಿನ ಅನೇಕ ಮಹಿಮಾಮಹರು ಬಹಳವಾಗಿ ಶ್ರಮಿಸಿದ್ದಾರೆ. ಆದರೆ ಕೃಷ್ಣಾವತಾರದ ಜನಪ್ರಿಯತೆಯ ಎದುರು ಭೀಷ್ಮಪ್ರೋಕ್ತ ಸಹಸ್ರನಾಮವು ಹೆಚ್ಚು ಪ್ರಚಾರದಲ್ಲಿ ಬಂದು, ಪದ್ಮಪುರಾಣೋಕ್ತ ಹಾಗೂ ಇತರೇ ಎರಡು ವಿಷ್ಣು ಸಹಸ್ರನಾಮಗಳು ಹಿನ್ನಡೆ ಪಡೆದುವು ಎಂದು ಭಾವಿಸಬಹುದು. ಪದ್ಮಪುರಾಣೋಕ್ತ ವಿಷ್ಣು ಸಹಸ್ರನಾಮವನ್ನು 'ಇತ್ಯೇತದ್ ವಾಸುದೇವಸ್ಯ ವಿಷ್ಣೋರ್ನಾಮ ಸಹಸ್ರಕಮ್' ಎಂದು ಪ್ರಯೋಗಿಸಿರುವುದರಿಂದ, ಇದನ್ನು 'ವಾಸುದೇವ ಸಹಸ್ರನಾಮ' ಎಂದೂ ಕರೆಯುತ್ತಾರೆ.

'ಗೇಯಂ - ಗೀತಾ, ನಾಮ-ಸಹಸ್ರಂ' - ಎಂದು ಶಂಕರಾಚಾರ್ಯರು ತಿಳಿಸಿದ್ದಾರೆ. ಇಲ್ಲಿ 'ಗೀತೆ' ಎಂದರೆ ಭಗವದ್ಗೀತೆ, 'ನಾಮ ಸಹಸ್ರಂ' ಎಂದರೆ 'ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರ' ಎಂದರ್ಥ. ಈ ಎರಡೂ ಗ್ರಂಥಗಳಿಗೆ ಇರುವ ವ್ಯಾಖ್ಯಾನಗಳಲ್ಲಿ ಶಂಕರಾಚಾರ್ಯರು ರಚಿಸಿರುವವುಗಳೇ ಪ್ರಾಚೀನತಮ ವ್ಯಾಖ್ಯಾನಗಳು.

ಸ್ವಶಾಖೋಪನಿಷದ್ಗೀತಾ—
ವಿಷ್ಣೋರ್ನಾಮ ಸಹಸ್ರಕಮ್
ಶ್ರೀ ಸೂಕ್ತಂ, ಪುರುಷಂ ಚೈವ-
ನಿತ್ಯ ಮಾವರ್ತಯೇ ದ್ವಿಜಃ

ಅಂದರೆ ಪ್ರತಿ ಗೃಹಸ್ಥನು ತನ್ನ ವೇದಶಾಖೆಯನ್ನು ಉಪನಿಷತ್ತನ್ನು, ಭಗವದ್ಗೀತೆಯನ್ನು, ವಿಷ್ಣು ಸಹಸ್ರನಾಮವನ್ನು, ಶ್ರೀ ಸೂಕ್ತ - ಪುರುಷ ಸೂಕ್ತಗಳನ್ನು, ಪ್ರಣವವನ್ನು ಪ್ರತಿದಿನ ಅನುಸಂಧಾನ ಮಾಡಬೇಕೆಂದು ಶಿಷ್ಟರ ಸಂಪ್ರದಾಯ. ಇದು ಇಂದಿಗೂ ಮುಂದುವರಿದುಕೊಂಡು ಬರುತ್ತಿದೆ.

ಆಳ್ವಾರರೂ ಕೂಡ 'ಪೇರಾಯಿರಮ್ ಮೊದುಮಿಸ್ಸಗಳ್' (ಪರಮಾತ್ಮನ ಸಾವಿರ ಹೆಸರುಗಳನ್ನು ಭಜಿಸಲೇಬೇಕು) ಎಂದು ಭಕ್ತರಿಗೆ ಬೋಧಿಸಿದ್ದಾರೆ.

## ಭೀಷ್ಮಪ್ರೋಕ್ತದ ಜನಪ್ರಿಯತೆ :

ಪ್ರಾಚೀನವಾದ ಭೀಷ್ಮಪ್ರೋಕ್ತ ವಿಷ್ಣು ಸಹಸ್ರನಾಮಕ್ಕೆ ಇರುವ ಜನಪ್ರಿಯತೆಯ ಗುಟ್ಟೇನು?

ಈ ಪ್ರಶ್ನೆಗೆ ಪರಾಶರಭಟ್ಟರು ಈ ರೀತಿ ಉತ್ತರ ನೀಡಿದ್ದಾರೆ—

ತಿರುಮಲೆ — ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸದೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**

ತಿರುಪತಿ.

ಮಹಾಭಾರತ ಸಾರಸ್ತ್ವಾತ್ -
ಋಷಿಭಿಃ ಪರಿಗಾನತಃ
ವೇದಾಚಾರ್ಯ ಸಮಾಹಾರಾತ್ -
ಭೀಷ್ಮೋಕ್ತ್ಯತ್ಯಪ್ಯ ಮತತ್ವತಃ
ಪರಿಗ್ರಹಾತಿಶಯತಃ -
ಗೀತಾ ದ್ಯೇಕಾರ್ಥ ತತ್ವನಃ
ಸಹಸ್ರನಾಮ್ನಾಂ ಅಧ್ಯಾಯಂ -
ಉಪಾದೇಯತಮೋ ಮತಃ

ಶ್ರೀ ವಿಷ್ಣು ಸಹಸ್ರನಾಮವು ಮಹಾಭಾರತದ ಸಾರವಾಗಿರುವುದರಿಂದಲೂ, ಅನೇಕ ಮಹರ್ಷಿಗಳು ಇದನ್ನು ಬಹಳವಾಗಿ ಹೊಗಳಿರುವುದರಿಂದಲೂ, ಎಲ್ಲ ರೀತಿಯ ಪರಮಾತ್ಮನ ಹೆಸರುಗಳನ್ನೂ ಪರೀಕ್ಷಿಸಿ ಈ ರೀತಿಯಲ್ಲಿ ಆರಿಸಿ ಹಾರದಂತೆ ಭಗವಾನ್ ವ್ಯಾಸ ಮಹರ್ಷಿಯು ಇಲ್ಲಿ ಪೋಣಿಸಿರುವುದರಿಂದಲೂ, ಭೀಷ್ಮನು ಇದನ್ನೇ ಉತ್ತಮೋತ್ತಮವಾದ ಧರ್ಮವೆಂದು ಹೇಳಿರುವುದರಿಂದಲೂ, ಶಿಷ್ಟರು ಈ ನಾಮಾವಳಿಯನ್ನು ಅತ್ಯಂತ ಆದರಭಾವದಿಂದ ಪರಿಗ್ರಹಿಸಿರುವುದರಿಂದಲೂ, ಭಗವದ್ಗೀತಾದಿ ವೇದಾಂತ ಗ್ರಂಥಗಳೊಂದಿಗೆ ಇದನ್ನು ಸರಿಸಮನಾಗಿ ಪರಿಗಣಿಸಿರುವುದರಿಂದಲೂ, ನಮ್ಮಗಳಿಗೆ ಈ ವಿಷ್ಣು ಸಹಸ್ರನಾಮವು ಎಲ್ಲ ರೀತಿಯಲ್ಲಿಯೂ ಉಪಾದೇಯವಾಗಿದೆ. ಇದೇ ಈ ವಿಷ್ಣು ಸಹಸ್ರನಾಮದ ಪ್ರಾಮುಖ್ಯ ಎಂದು ಪರಾಶರ ಭಟ್ಟರ ಶ್ರೀಸೂಕ್ತಿ.

## ಮಹಾಭಾರತದ ಸಾರ :

ಈ ವಿಷ್ಣು ಸಹಸ್ರನಾಮವು ಮಹಾಭಾರತದ ಸಾರವೆಂದು ತಿಳಿಸಲಾಗಿದೆ. ಹೇಗೆಂದರೆ ಶ್ರೀಮನ್ನಾರಾಯಣನ ಅವತಾರವಾದ ವೇದವ್ಯಾಸನು ಮಹಾಭಾರತವನ್ನು ಸರ್ವಶಾಸ್ತ್ರ ಸಾರವಾದುದೆಂದು ರಚಿಸಿದನು. 'ಇದರಲ್ಲಿ ಇಲ್ಲದ ವಿಷಯ ಬೇರೆ ಯಾವುದೂ ಇಲ್ಲ, ಎಲ್ಲೂ ಇಲ್ಲ' ಎಂದು ಸ್ವಯಂ ಆತನೇ ತಿಳಿಸಿದ್ದಾನೆ. ಅಂತಹ ಮಹಾಭಾರತದಲ್ಲಿ ಪ್ರಾಣಪ್ರದವಾದ ಅನುಶಾಸನ ಪರ್ವದಲ್ಲಿ, ದಾನಧರ್ಮಾದಿ ವಿವಿಧ ವಿಷಯಗಳನ್ನು ವಿಶದೀಕರಿಸುತ್ತಾ, ನೂರ ಒಂಭತ್ತನೆಯ ಅಧ್ಯಾಯವಾದ ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರವನ್ನು ಸರ್ವ ಧರ್ಮ ಸಾರವಾಗಿರುವುದೆಂದು ತಿಳಿಸಿದನು.

ಭೀಷ್ಮನು ಶರತಲ್ಪಗತನಾಗಿದ್ದಾಗ, ಧರ್ಮರಾಯನು ಬಂದು ಆತನನ್ನು ಪ್ರಾರ್ಥಿಸಲು, ಆತನು ಅನೇಕ ಧರ್ಮಗಳನ್ನು, ಧರ್ಮ ಸೂಕ್ಷ್ಮಗಳನ್ನು ಉಪದೇಶಿಸಿದ ವಿಭಾಗವೇ ಅನುಶಾಸನ ಪರ್ವದ ಹೃದಯ. ಆ ಸಂದರ್ಭದಲ್ಲಿ ಧರ್ಮರಾಯನು --

ಕಿಮೇಕಂ ದೈವತಂ ಲೋಕೇ-
ಕಿಂ ವಾಪ್ಯೇಕಂ ಪರಾಯಣಂ
ಸ್ತುವನ್ತಃ ಕಂ, ಕಮರ್ಚನ್ತಃ-
ಪ್ರಾಪ್ನುಯುರ್ಮಾನವಾಶ್ಶುಭಮ್
ಕೋ ಧರ್ಮ ಸ್ಸರ್ವಧರ್ಮಾಣಾಂ-
ಭವತಃ ಪರಮೋ ಮತಃ
ಕಿಂ ಜಪನ್ಮುಚ್ಯತೇ ಜನ್ತುಃ
ಜನ್ಮ ಸಂಸಾರ ಬಂಧನಾತ್

ಪರದೈವ ಎಂದರೆ ಯಾವುದು ? ಪರಮ ಪ್ರಾಪ್ಯವಾದುದು ಯಾವುದು? ಎಲ್ಲ ಶುಭಗಳನ್ನು ಮಾನವರು ಹೊಂದಬೇಕೆಂದರೆ ಯಾರನ್ನು ಸ್ತುತಿಸಿ, ಅರ್ಚಿಸಬೇಕು ? ಜನ್ಮ ಪರಂಪರೆಯಿಂದಲೂ, ಸಂಸಾರ ಬಂಧನದಿಂದಲೂ ಮುಕ್ತಿಯನ್ನು ಪಡೆಯಬೇಕೆಂದರೆ ಯಾವ ಮಂತ್ರವನ್ನು ಮುಖ್ಯವಾಗಿ ಜಪಿಸಬೇಕು ? ಎಂದು ಪ್ರಶ್ನಿಸುವನು.

ಇದನ್ನು ಆಲಿಸಿದ ಆಚಾರ್ಯ ಭೀಷ್ಮನು ಈ ಪ್ರಶ್ನೆಗಳಿಗೆ ಶಾಸ್ತ್ರ ಸಮ್ಮತವಾದ ಸಮಾಧಾನ ನೀಡಲು ಪ್ರಯತ್ನಿಸುತ್ತಾ, ಹೀಗೆಂದನು-

ಜಗತ್ಪ್ರಭುಂ ದೇವದೇವಂ-
ಅನನ್ತಂ ಪುರುಷೋತ್ತಮಮ್
ಸ್ತುವನ್ನಾಮ ಸಹಸ್ರೇಣ-
ಪುರುಷಸ್ಸತತೋತ್ಥಿತಃ
ತಮೇವಚಾರ್ಚಯನ್ ನಿತ್ಯಂ
ಭಕ್ತ್ಯಾ ಪುರುಷಮವ್ಯಯಮ್
ಧ್ಯಾಯನ್ ಸ್ತುವನ್ ನಮಸ್ಯನ್ ಚ
ಯಜಮಾನ ಸ್ತ ಮೇವ ಚ
ಅನಾದಿ ನಿಧನಂ ವಿಷ್ಣುಂ-
ಸರ್ವ ಲೋಕ ಮಹೇಶ್ವರಮ್
ಲೋಕಾಧ್ಯಕ್ಷಂ ಸ್ತುವನ್ನಿತ್ಯಂ-
ಸರ್ವದುಃಖಾತಿಗೋ ಭವೇತ್
ಬ್ರಹ್ಮಣ್ಯಂ ಸರ್ವ ಧರ್ಮಜ್ಞಂ-
ಲೋಕಾನಾಂ ಕೀರ್ತಿ ವರ್ಧನಮ್
ಲೋಕನಾಥಂ ಮಹದ್ಭೂತಂ-
ಸರ್ವಭೂತ ಭವೋದ್ಭವಮ್
ಏಷ ಮೇ ಸರ್ವ ಧರ್ಮಾಣಾಂ-
ಧರ್ಮೋಽಧಿಕತಮೊ ಮತಃ
ಯದ್ಭಕ್ತ್ಯಾ ಪುಂಡರೀಕಾಕ್ಷಂ-
ಸ್ತವೈರರ್ಚೇನ್ನರಸ್ಸದಾ

ಜಗತ್ಪ್ರಭುವೂ, ದೇವದೇವನೂ, ಅನಂತನೂ, ಪುರುಷೋತ್ತಮನೂ, ಆದ್ಯಂತ ರಹಿತನೂ, ಜಗತ್ಕಾರಣನೂ, ಬ್ರಹ್ಮಣ್ಯನೂ, ಸರ್ವಲೋಕೈಕನಾಥನೂ ಆದ ಶ್ರೀ ಮಹಾವಿಷ್ಣುವನ್ನು ಸಹಸ್ರನಾಮಗಳಿಂದ

ಸ್ತುತಿಸುತ್ತಾ, ಪೂಜಿಸುತ್ತಾ, ಧ್ಯಾನಿಸುತ್ತಾ, ಯಜ್ಞ ಯಾಗಾದಿಗಳಿಂದ ಆರಾಧಿಸುತ್ತಿರುವವನು, ಸರ್ವ ದುಃಖಗಳಿಂದಲೂ ವಿಮುಕ್ತಿ ಹೊಂದುತ್ತಾನೆ. ಆದುದರಿಂದ, ಮಗು, ಧರ್ಮರಾಜಾ! ಯಾವಾಗಲೂ ಭಕ್ತಿಯಿಂದ ಪುಂಡರೀಕಾಕ್ಷನನ್ನು ಸ್ಮರಿಸುತ್ತಾ, ಅರ್ಚಿಸುತ್ತಾ ಇರುವುದೆ ಎಲ್ಲ ಧರ್ಮಗಳಲ್ಲಿಯೂ ಉತ್ತಮವಾದ ಧರ್ಮವೆಂದು ನನ್ನ ನಿಶ್ಚಿತ ಅಭಿಪ್ರಾಯ.

ಆದುದರಿಂದ ಶ್ರೀ ವಿಷ್ಣು ಸಹಸ್ರನಾಮಗಳ ಮುಖಾಂತರ ಭಗವಂತನನ್ನು ಧ್ಯಾನಿಸುವುದು ಆಚಾರ್ಯ ಭೀಷ್ಮನ ದೃಷ್ಟಿಯಿಂದ ಉತ್ತಮವಾದ ಧರ್ಮವೆಂದು ಇದರಿಂದ ಅಭಿವ್ಯಕ್ತವಾಗುತ್ತದೆ.

## ಚತುರ್ವಿಧ ಪುರುಷಾರ್ಥ :

ಯ ಇದಂ ಶೃಣುಯಾನ್ನಿತ್ಯಂ-
ಯಶ್ಚಾಪಿ ಪರಿಕೀರ್ತಯೇತ್
ನಾಶುಭಂ ಪ್ರಾಪ್ನುಯಾತ್ ಕಿಂಚಿತ್-
ಸೋಽಮುತ್ರೇಹ ಚ ಮಾನವಃ
ವೇದಾಂತಗೋ ಬ್ರಾಹ್ಮಣಸ್ಸ್ಯಾತ್-
ಕ್ಷತ್ರಿಯೋ ವಿಜಯೀ ಭವೇತ್
ವೈಶ್ಯೋ ಧನಸಮೃದ್ಧಸ್ಸ್ಯಾತ್-
ಶೂದ್ರಸ್ಸುಖಮವಾಪ್ನುಯಾತ್
ಧರ್ಮಾರ್ಥೀ ಪ್ರಾಪ್ನುಯಾದ್ಧರ್ಮಂ
ಅರ್ಥಾರ್ಥೀ ಚ ಅರ್ಥಮಾಪ್ನುಯಾತ್
ಕಾಮಾ ನವಾಪ್ನುಯಾತ್ಕಾಮೀ
ಪ್ರಜಾರ್ಥೀ ಚಾಪ್ನುಯಾತ್ಪ್ರಜಾಃ
ಭಕ್ತಿಮಾನ್ಯಸ್ಸದೋತ್ಥಾಯ
ಶುಚಿ ಸ್ತದ್ಗತ ಮಾನಸಃ
ಸಹಸ್ರಂ ವಾಸುದೇವಸ್ಯ
ನಾಮ್ನಾಮೇತತ್ಪ್ರಕೀರ್ತಯೇತ್
ಯಶಃ ಪ್ರಾಪ್ನೋತಿ ವಿಪುಲಂ
ಯಾತಿ ಪ್ರಾಧಾನ್ಯ ಮೇವ ಚ
ಅಚಲಾಂ ಶ್ರಿಯ ಮಾಪ್ನೋತಿ
ಶ್ರೇಯಃ ಪ್ರಾಪ್ನೋತ್ಯನುತ್ತಮಮ್
ನ ಭಯಂ ಕ್ವಚಿ ದಾಪ್ನೋತಿ
ವೀರ್ಯಂ ತೇಜ ಶ್ಚ ವಿನ್ದತಿ
ಭವತ್ಯರೋಗೀ ದ್ಯುತಿಮಾನ್
ಬಲರೂಪ ಗುಣಾನ್ವಿತಃ
ರೋಗಾರ್ತೋ ಮುಚ್ಯತೇ ರೋಗಾತ್
ಬದ್ಧೋ ಮುಚ್ಯೇತ ಬಂಧನಾತ್
ಭಯಾನ್ ಮುಚ್ಯೇತ ಭೀತಸ್ತು
ಮುಚ್ಯೇತಾ ಪನ್ನ ಆಪದಃ
ದುರ್ಗಾ ಣ್ಯತಿ ತರತ್ಯಾಶು
ಪುರುಷಃ ಪುರುಷೋತ್ತಮಮ್
ಸ್ತುವ ನ್ನಾಮ ಸಹಸ್ರೇಣ
ನಿತ್ಯಂ ಭಕ್ತಿ ಸಮನ್ವಿತಃ
ವಾಸುದೇವಾಶ್ರಯೋ ಮರ್ತ್ಯೋ
ವಾಸುದೇವ ಪರಾಯಣಃ
ಸರ್ವ ಪಾಪ ವಿಶುದ್ಧಾತ್ಮಾ
ಯಾತಿ ಬ್ರಹ್ಮ ಸನಾತನಮ್

ಇಂತಹ ವಿಷ್ಣು ಸಹಸ್ರನಾಮ ಸ್ತೋತ್ರವನ್ನು ಪಠಿಸಿದರಾಗಲಿ, ಆಲಿಸಿದರಾಗಲಿ, ಅಂತಹ ವ್ಯಕ್ತಿಯು ಇಹಪರಗಳೆರಡರಲ್ಲಿಯೂ ಯಾವುದೇ ಅಶುಭವನ್ನೂ ಹೊಂದಲಾರನು. ಇದರ ಶ್ರವಣದಿಂದ ಬ್ರಾಹ್ಮಣನು ವೇದಾಂತ ವಿಜ್ಞಾನವನ್ನು, ಕ್ಷತ್ರಿಯನು ವಿಜಯವನ್ನೂ, ವೈಶ್ಯನು ಧನ ಸಮೃದ್ಧಿಯನ್ನೂ, ಶೂದ್ರನು ಸುಖಾನುಭವವನ್ನು ಹೊಂದುವನು. ಫಲಾಪೇಕ್ಷೆಯಿಂದ ಪಠಿಸುವವರ ಕೋರಿಕೆಗಳು ತಪ್ಪದೆ ನೆರವೇರುವುವು. ಮಕ್ಕಳು ಬೇಕೆನ್ನುವ ಸಂತಾನಾರ್ಥಿಗಳಿಗೆ ಮಕ್ಕಳಾಗುವುವು. ಬೆಳಗಿನ ಜಾವ ಎದ್ದು, ಈ ಸ್ತೋತ್ರವನ್ನು ಪಠಿಸುವವನನ್ನು ಉತ್ತಮ ಕುಲದಲ್ಲಿ ಹುಟ್ಟಿದವನಂತೆ ಗೌರವಿಸಲ್ಪಡುವನು. ಕೀರ್ತಿಯನ್ನು, ಸಕಲ ಸಂಪದಗಳನ್ನು ಬಲವನ್ನು, ತೇಜಸ್ಸನ್ನು ಹೊಂದುವನು. ಅಂತಹವನಿಗೆ ಎಲ್ಲಿಯೂ, ಯಾವ ಕಡೆಯಿಂದಲೂ ಭಯವೆಂಬುದೇ ಇರುವುದಿಲ್ಲ. ಇಷ್ಟೇ ಅಲ್ಲ. ಭಕ್ತಿಯಿಂದ ಪ್ರತಿದಿನ ವಿಷ್ಣು ಸಹಸ್ರನಾಮ ಸ್ತೋತ್ರವನ್ನು ಪಾರಾಯಣ ಮಾಡಿ, ಅನನ್ಯನಾಗಿ ಆ ಮಹಾವಿಷ್ಣುವನ್ನೆ ಚಿಂತಿಸುತ್ತಾ, ಆ ವಾಸುದೇವನನ್ನು ಆಶ್ರಯಿಸುವವನು ಸರ್ವಪಾಪ ವಿನಿರ್ಮುಕ್ತನಾಗಿ, ಮೋಕ್ಷವನ್ನು ಸಹ ಹೊಂದುವನು. ಎಂಬುದಾಗಿ ಹೇಳಲ್ಪಟ್ಟಿದೆ.

ಆದುದರಿಂದ ಈ ಚತುರ್ವಿಧ ಪುರುಷಾರ್ಥಕ್ಕೆ ಸಾಧಕವಾದುದು ಎಂಬುದು ಸ್ಪಷ್ಟವಾಗಿದೆ.

ಈ ಸಹಸ್ರನಾಮ ಸ್ತೋತ್ರದಲ್ಲಿರುವ ಹೆಸರುಗಳು ಶ್ರೀಮನ್ನಾರಾಯಣನ ಕಲ್ಯಾಣಗುಣಗಳನ್ನು ಆತನ ದಿವ್ಯಚೇಷ್ಟಿತಗಳನ್ನು ಪೂರ್ತಿಯಾಗಿ ವಿವರಿಸುತ್ತವೆ. ಇವನ್ನೇ ಲೋಕಗಳಲ್ಲಿ ವೇದಗಳಲ್ಲಿ ಬೇರೆ ಬೇರೆಯಾಗಿ ಹೇಳಲಾಗಿದೆ. ತ್ರಿಲೋಕ ಜ್ಞಾನಿಗಳಾದ ಸನಕ, ಸನಂದನ, ಸನತ್ಕುಮಾರ, ನಾರದಾದಿ ಮಹಾಮುನಿಗಳು ಈ ಹೆಸರುಗಳಲ್ಲಿರುವ ಒಂದೊಂದು ಹೆಸರಿನಲ್ಲಿರುವ ದಿವ್ಯಶಕ್ತಿಯನ್ನು ಸ್ವಾನುಭವದಿಂದ ತಿಳಿದುಕೊಂಡು, ಪಠಿಸುತ್ತಿದ್ದರು, ಕೀರ್ತನೆ ಗೈಯ್ಯುತ್ತಿದ್ದರು. ಮಾಲಾಕಾರನು ಹೂಮಾಲೆಯನ್ನು ಉತ್ತಮ ಹಾಗೂ ಸುಂದರವಾದ ಪುಷ್ಪಗಳಿಂದ ನಿರ್ಮಿಸಿದಂತೆ, ಭಗವಾನ್ ವೇದವ್ಯಾಸನು ಇಂತಹ ಸುಪರೋಕ್ಷಿತಗಳಾದ ಭಗವನ್ನಾಮಗಳಿಂದ ಈ ವಿಷ್ಣು ಸಹಸ್ರನಾಮಸ್ತೋತ್ರ ಮಾಲಿಕೆಯನ್ನು ರಚಿಸಿದ್ದಾನೆ. ಆದುದರಿಂದಲೇ 'ಋಷಿಭಿಃ ಪರಿಗೀತಾನಿ' ಎಂದು ಹೇಳಲಾಗಿದೆ.

## ಈ ಸ್ತೋತ್ರದ ಫಲವಿಶೇಷ :

ಈ ಸ್ತೋತ್ರದಲ್ಲಿರುವ ಹೆಸರುಗಳಲ್ಲಿ ಒಂದೊಂದನ್ನೂ ಚತುರ್ಥ್ಯಂತವಾಗಿ ಬದಲಾಯಿಸಿ, ಅದರ ಮೊದಲಿನಲ್ಲಿ ಪ್ರಣವವನ್ನು ಕಡೆಯಲ್ಲಿ ನಮಶ್ಶಬ್ದವನ್ನು ಸೇರಿಸಿದಲ್ಲಿ (ಓಂ ವಿಶ್ವಾಯ ನಮಃ, ಓಂ ವಿಷ್ಣವೇ ನಮಃ) ಅದು ಮಹಾಮಂತ್ರವಾಗುತ್ತದೆ.

ಇಂತಹ ಮಂತ್ರಾಕ್ಷರಗಳಿಂದ ಮಾಲೆ ಮಾಡಲ್ಪಟ್ಟ ಈ ಸ್ತೋತ್ರವು 'ಮಹಾಮಾಲಾ ಮಂತ್ರ'ವಾಗುತ್ತದೆ. ಆದುದರಿಂದಲೇ ಹಲವು ಮಹನೀಯರು ಈ ಸೋತ್ರವನ್ನು 'ಐಹಿಕಾಮುಷ್ಮಿಕ ಫಲಸಿದ್ಧಿ'ಗಾಗಿ ವಿನಿಯೋಗಿಸುತ್ತಾರೆ.

ಆಯುರ್ವೇದ ಗ್ರಂಥವಾದ ಶಾರ್ಙ್ಗಧರ ಸಂಹಿತೆಯಲ್ಲಿ

ವಿಷ್ಣು ಸಹಸ್ರ ಮೂರ್ಧಾನಂ
ಚರಾಚರಪತಿಮ್ ವಿಭುಮ್
ಸ್ತುವನ್ನಾಮ ಸಹಸ್ರೇಣ
ಜ್ವರಾನ್ ಸರ್ವಾನ್ ವ್ಯಪೋಹತಿ

ವಿಷ್ಣು ಸಹಸ್ರನಾಮ ಸ್ತೋತ್ರ ಪಾರಾಯಣವು ಸರ್ವವಿಧ ಜ್ವರ ನಿವಾರಕವೆಂದು ತಿಳಿಸುತ್ತದೆ.

ಜನ್ಮಾಂತರ ಕೃತಂ ಪಾಪಂ
ವ್ಯಾಧಿ ರೂಪೇಣ ಬಾಧತೇ
ತಚ್ಛಾನ್ತಿರೌಷಧೈಃ ದಾನೈಃ
ಜಪ ಹೋಮ ಸುರಾರ್ಚನೈಃ

ಎಂದು ನಮ್ಮ ಪೂರ್ವೀಕರು ರೋಗ ನಿವಾರಣೆಗೆ ಔಷಧಿಯೊಂದಿಗೆ ದಾನ-ಜಪ- ಹೋಮ- ಸುರಾರ್ಚನಾದಿಗಳನ್ನೂ ಕೂಡ ವಿಧಿಸಿದ್ದಾರೆ.

ಔಷಧಿಯು ಶರೀರದ ಸ್ವಸ್ಥತೆಯನ್ನು ತಂದುಕೊಟ್ಟರೆ, ಜಪ ಹೋಮಾದಿಗಳು ಮಾನಸಿಕ ಪ್ರಶಾಂತತೆ, ಸ್ವಸ್ಥತೆಯನ್ನು ತಂದುಕೊಡುತ್ತವೆ.

ನಮ್ಮ ಹಿಂದಿನ ಜನ್ಮದಲ್ಲಿ ಮಾಡಿದ ಪಾಪಗಳೇ ಈ ಜನ್ಮದಲ್ಲಿನ ವ್ಯಾಧಿಗಳಾಗಿ ನಮ್ಮನ್ನು ಹಿಂಸಿಸುತ್ತಿರುವೆ. ಆದುದರಿಂದ ಇವುಗಳ ನಿವಾರಣೆಗೆ ಭಗವದನುಗ್ರಹದ ವಿನಹ ಬೇರೆ ಯಾವುದೂ ಸಮರ್ಥವಾದುದಲ್ಲ.

ವಿಷ್ಣು ಸಹಸ್ರನಾಮ ಸ್ತೋತ್ರ ಪಾರಾಯಣದಿಂದ ಈ ರೀತಿಯಲ್ಲಿ ಭಗವದನುಗ್ರಹವು ಸುಲಭವಾಗಿ ಲಭಿಸುವುದು. ಆದುದರಿಂದ ಜ್ವರ ನಿವಾರಣೆಗೆ ಈ ಸ್ತೋತ್ರವನ್ನು ಪಾರಾಯಣ ಮಾಡುವುದು ಬಹಳ ಪ್ರಯೋಜನಕರವಾದುದೆಂದು ತಿಳಿದುಬಂದಿದೆ.

ಇದೇ ರೀತಿಯಲ್ಲಿ ಕೆಲವೊಂದು ಮಹಾರೋಗಗಳೂ ಕೂಡ-

ತಥೈವ ಭಗವಾನ್ನಾಮ
ಸಹಸ್ರಂ ಭಾರತೋದಿತಮ್

--ಎಂಬಂತೆ ವಿಷ್ಣು ಸಹಸ್ರನಾಮ ಪಾರಾಯಣದಿಂದ ನಿವಾರಣೆಯಾಗುವುವು ಎಂದು ಸೂಚಿಸಲಾಗಿದೆ. ಅಂತೆಯೇ ಇದರ ಸತತ ಪಾರಾಯಣದಿಂದ ಕುಷ್ಠರೋಗವೂ ಕೂಡ ನಿರ್ಮೂಲವಾಗುತ್ತದೆಯೆಂದು ನಂಬಲಾಗಿದೆ.

ಮಹಾಕವಿ ಬಾಣಭಟ್ಟನು ತನ್ನ 'ಕಾದಂಬರಿ' ಕೃತಿಯಲ್ಲಿ ಸೂತಿಕಾಗೃಹ ಪ್ರಾಂಗಣದಲ್ಲಿ ಶಿಶು ಸಂರಕ್ಷಣೆಗಾಗಿ 'ವಿಷ್ಣು ಸಹಸ್ರನಾಮ ಸ್ತೋತ್ರ' ವನ್ನು ಪಾರಾಯಣ ಮಾಡುತ್ತಿದ್ದರೆಂದು 'ಅನವರತ ಪರಿಪಠ್ಯಮಾನ ನಾರಾಯಣ ನಾಮ ಸಹಸ್ರಕಮ್' ಎಂಬ ವಾಕ್ಯದ ಮುಖಾಂತರ ವರ್ಣಿಸಿದ್ದಾನೆ.

ಇದರಿಂದ ವಿಷ್ಣು ಸಹಸ್ರನಾಮ ಸ್ತೋತ್ರವು ತುಂಬಾ ಪ್ರಭಾವಯುತವಾದುದೆಂಬುದು ಸುಸ್ಪಷ್ಟ.

## ವಿಷ್ಣು ಸಹಸ್ರನಾಮದ ಅಗತ್ಯ :

ಇಂದಿನ ಮಾಲಿನ್ಯ ಸನ್ನಿವೇಶದಲ್ಲಿ ಮಾನವ ಜೀವನ ನಡೆಸುವುದೇ ಕಷ್ಟವಾಗಿದೆ. ಶಬ್ದ ಮಾಲಿನ್ಯ, ವಾಯು ಮಾಲಿನ್ಯ ಪರಿಸರ ಹಾಗೂ ಆಹಾರ ಮಾಲಿನ್ಯಗಳು ವ್ಯಕ್ತಿಯ ಜೀವನವನ್ನು ಅಸಹ್ಯ ಹಿಂಸೆಗೆ ಗುರಿ ಮಾಡಿವೆ. ಇವೆಲ್ಲವುಗಳೊಂದಿಗೆ ರಾಜಕೀಯ, ವ್ಯಕ್ತಿಯ ಅಧಃಪತನಗಳು ಅವನ ಮನಶ್ಶಾಂತಿಯನ್ನು ನುಚ್ಚುನೂರು ಮಾಡಿವೆ. ಇಂತಹ ಸನ್ನಿವೇಶದಲ್ಲಿ ಅವನಿಗೆ ಅತ್ಯಗತ್ಯವಾದ ಮಾನಸಿಕ ಶಾಂತಿಯು ಇಂತಹ ನಾಮ ಸಂಕೀರ್ತನೆಗಳಿಂದ ಮಾತ್ರ ಸಾಧ್ಯವಾಗುತ್ತದೆ. ಆದುದರಿಂದ ಪ್ರತಿ ಮಾನವನಿಗೂ ವಿಷ್ಣು ಸಹಸ್ರನಾಮದ ಪಠನದ ಅಗತ್ಯ ತುಂಬಾ ಇದೆ.

ಭಗವಂತನಾದ ಶ್ರೀಮನ್ನಾರಾಯಣನನ್ನು ಅವನ ಸಹಸ್ರನಾಮಗಳಿಂದ ಅರ್ಚಿಸಿ, ಅವುಗಳ ಜಪ ಪಾರಾಯಣಗಳ ಮುಖಾಂತರ ಮಾನವನು ಜನ್ಮ ಸಂಸಾರದಿಂದ ಮುಕ್ತನಾಗುವನು ಹಾಗೂ ಪರಮಾತ್ಮನ ಸಾಯುಜ್ಯವನ್ನು ಪಡೆಯುವನು. ಈ ಜಪ - ಪಾರಾಯಣ - ಅರ್ಚನೆಗಳನ್ನು ಪ್ರತಿಯೊಬ್ಬರೂ ಸ್ವತಃ ಮಾಡಬೇಕು. ಯಾರಿಗೆ 'ಶಾಂತಿ'ಯ ಅವಶ್ಯಕತೆ ಇದೆಯೊ ಅವರವರೇ ಇದನ್ನು ಮಾಡುವುದು ಒಳ್ಳೆಯದು.

ಸ್ವತಃ ಮಾಡಲು ಸಾಧ್ಯವಿಲ್ಲದವರು ಬೇರೆಯವರಿಂದ ಮಾಡಿಸಬಹುದು. ಇದನ್ನು ಮಂತ್ರರೂಪದಲ್ಲಿ ಉಚ್ಚರಿಸುತ್ತಾ, ಒಂದೊಂದು ನಾಮಕ್ಕೆ ಒಂದೊಂದರಂತೆ ತುಳಸಿ, ಪುಷ್ಪಾದಿಗಳನ್ನು ಅರ್ಪಿಸಬಹುದು. ಇದನ್ನೇ 'ಅರ್ಚನೆ' ಎಂದು ಕರೆಯುವರು. ಇದನ್ನು ಸಾಲಿಗ್ರಾಮಾದಿಗಳನ್ನು ಇಟ್ಟೂ ಮಾಡಬಹುದು. ಇಲ್ಲವೆ ದೇವಾಲಯಗಳಲ್ಲಿ ಅರ್ಚಕರ ಮುಖಾಂತರ ಮಾಡಿಸಬಹುದು. ಇದನ್ನು ಸಾಮೂಹಿಕವಾಗಿಯೂ ಮಾಡಿಸಬಹುದು. ಆಂಧ್ರಪ್ರದೇಶದ ಶ್ರೀ ಶ್ರೀ ಶ್ರೀ ತ್ರಿದಂಡಿ ಶ್ರೀಮನ್ನಾರಾಯಣ ರಾಮಾನುಜ ಚಿನ್ನಜೀಯರ್ ಸ್ವಾಮಿಯವರು ಇಂತಹ ಸಾಮೂಹಿಕ ವಿಷ್ಣು ಸಹಸ್ರನಾಮ ಯಜ್ಞಗಳನ್ನು ಅಲ್ಲಿನ ಬಹಳಷ್ಟು ಊರುಗಳಲ್ಲಿ ಮಾಡಿಸಿದ್ದಾರೆ. ನೂರು ಜನ ಸೇರಿ ಒಂದು ಸಲ ೧೦೦೦ ನಾಮಾವಳಿಯನ್ನು ಉಚ್ಚರಿಸಿದರೆ ಲಕ್ಷಾರ್ಚನೆಯಾಗುತ್ತದೆ. ಹೀಗೆ ಕೋಟಿ ಅರ್ಚನೆಯನ್ನು ಮಾಡಬಹುದು.

ಪ್ರತಿನಿತ್ಯವೂ ವಿಷ್ಣು ಸಹಸ್ರನಾಮ ಪಾರಾಯಣ ಮಾಡಬೇಕು. ಬೇಗ ಸಿದ್ಧಿಯಾಗಬೇಕಾದರೆ ಇದನ್ನು ೧೦೮, ೧೦೦೮, ಸಲ ಜಪ (ಆವರ್ತಿ) ಮಾಡುತ್ತಿರಬೇಕು. ಇನ್ನೂ ಬೇಗ ಸಿದ್ಧಿಯಾಗಬೇಕಾದರೆ ಈ ಸಹಸ್ರನಾಮದಿಂದ ಮೇಲೆ ತಿಳಿಸಿದಂತೆ ಸಹಸ್ರಾರ್ಚನೆ, ಲಕ್ಷಾರ್ಚನೆ, ಕೋಟಿ ಅರ್ಚನೆಗಳನ್ನು ಮಾಡಬೇಕು.

ಹೀಗೆ ಮಾಡುವುದು ಎಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವಾದುದು. ಆದುದರಿಂದ ವಿಷ್ಣು ಸಹಸ್ರನಾಮದ ಜಪ, ಪಾರಾಯಣ, ಅರ್ಚನೆಗಳು ಜಾತಿ, ಮತ, ಲಿಂಗ, ಭೇದವಿಲ್ಲದೆ ಎಲ್ಲರಿಗೂ ವಿಹಿತವಾದುದು. ಶುದ್ಧವಾಗಿ ಉಚ್ಚಾರ ಮಾಡಲು ಬಾರದವರು ಬೇರೆಯವರಿಂದ ಪಾರಾಯಣ ಮಾಡಿಸಿ, ಕಿವಿಯಾರ, ತದೇಕ ಚಿತ್ತದಿಂದ ಆಲಿಸಬೇಕು. ಹೀಗೆ ಮಾಡಿದರೂ ಪೂರ್ಣಫಲ ಲಭಿಸುತ್ತದೆ.

ಭೀಷ್ಮಪ್ರೋಕ್ತ 'ವಿಷ್ಣು ಸಹಸ್ರ ನಾಮ ಸ್ತೋತ್ರ'ಕ್ಕೆ ಅನೇಕ ವ್ಯಾಖ್ಯಾನಗಳುಂಟು. ಇವುಗಳಲ್ಲಿ ಶಂಕರಾಚಾರ್ಯರ ವ್ಯಾಖ್ಯಾನವು ಪ್ರಾಚೀನವಾದುದು. ಇದರ ನಂತರ ಹೆಸರುವಾಸಿಯಾದುದು ಪರಾಶರ ಭಟ್ಟರ ವ್ಯಾಖ್ಯಾನ.

ಪರಾಶರ ಭಟ್ಟರ ವ್ಯಾಖ್ಯಾನವು ರಸಭರಿತವಾದುದೂ, ಭಗವದ್ಭಕ್ತರಿಗೆ ಉಪಾದೇಯವಾದುದೂ ಆಗಿದೆ.

ಕೆಲವು ಉದಾಹರಣೆಗಳನ್ನು ಇಲ್ಲಿ ನೀಡಬಹುದು, ಅವುಗಳಲ್ಲಿ ಒಂದು--

ವಿಜಿತಾತ್ಮಾ ವಿಧೇಯಾತ್ಮಾ-
ಸತ್ಕೀರ್ತಿಃ ಛಿನ್ನ ಸಂಶಯಃ

ಈ ಶ್ಲೋಕಕ್ಕೆ ಇವರಿಬ್ಬರ ವ್ಯಾಖ್ಯಾನ ಹೀಗಿದೆ--

ವಿಜಿತಾತ್ಮಾ -- ಎಂಬುದಕ್ಕೆ ಜಿತೇಂದ್ರಿಯನು ಎಂಬುದು ಶಂಕರಾಚಾರ್ಯರ ವ್ಯಾಖ್ಯಾನ. ತನ್ನನ್ನು ಆಶ್ರಯಿಸಿದವರಿಗೆ ತಾನು ವಶ್ಯನಾಗಿ, ಭಕ್ತರಾದವರಿಗೆ ವಿಜಯವನ್ನು ಕೊಡಿಸಿ, ತಾನು ಅಪಜಯವನ್ನು ಸ್ವೀಕರಿಸುವವನು ಎಂದು ಪರಾಶರಭಟ್ಟರ ವ್ಯಾಖ್ಯಾನ.

ಕುರುಕ್ಷೇತ್ರ ಯುದ್ಧದಲ್ಲಿ ಆಚಾರ್ಯ ಭೀಷ್ಮನ ಪ್ರತಿಜ್ಞೆಯನ್ನು ನೆರವೇರಿಸುವುದಕ್ಕಾಗಿ, ತನ್ನ ಪ್ರತಿಜ್ಞೆಯನ್ನು ಭಂಗಗೊಳಿಸಲು ಶ್ರೀಕೃಷ್ಣನು ಚಕ್ರಾಯುಧವನ್ನು ಹಿಡಿಯಲಿಲ್ಲವೆ -- ಹಾಗೆ.

'ವಿಜಿತಾತ್ಮಾ ವಿಧೇಯಾತ್ಮಾ'

ಎನ್ನುವಾಗ, 'ಅವಿಧೇಯಾತ್' ಎಂದು ಪದಚ್ಛೇದ ಮಾಡಿ, 'ಅನನ್ಯವಶ್ಯನು' ಎಂದು ಶ್ರೀ ಶಂಕರಾಚಾರ್ಯರು ಅರ್ಥವನ್ನು ತಿಳಿಸಿದರು.

ಆದರೆ ಪರಾಶರಭಟ್ಟರು 'ವಿದೇಯಾತ್ಮಾ' ಎನ್ನುವುದನ್ನು ಪದಚ್ಛೇದ ಮಾಡಿ, 'ಭಕ್ತವಶ್ಯನು' (ಭಕ್ತನಿಗೆ ಅಧೀನನು) ಎಂಬ ಅರ್ಥವನ್ನು ಬರೆದರು. ಯಶೋದೆಗೆ, ಅರ್ಜುನನಿಗೆ ವಿಧೇಯನಾದ ರೀತಿಯನ್ನು ಗಮನಿಸಬಹುದು.

'ಸತ್ಕೀರ್ತಿಃ' ಒಳ್ಳೆ ಶಕ್ತಿಯನ್ನು ಹೊಂದಿರುವವನು ಎಂಬುದು ಶಂಕರಾಚಾರ್ಯರ ವ್ಯಾಖ್ಯಾನ.

ಸೌಲಭ್ಯ - ಸೌಶೀಲ್ಯಾದಿ ಗುಣಗಳಿಂದ ಏರ್ಪಟ್ಟ ಯಥಾರ್ಥವಾದ ಶಕ್ತಿಯನ್ನು ಹೊಂದಿರುವವನು ಎಂದು ಭಟ್ಟರ ವ್ಯಾಖ್ಯಾನ. ಸೌಶೀಲ್ಯಕ್ಕೆ ಶ್ರೀರಾಮಾವತಾರ, ಸೌಲಭ್ಯಕ್ಕೆ ಶ್ರೀ ಕೃಷ್ಣಾವತಾರ ಪ್ರಸಿದ್ಧವಾದವುಗಳು.

'ಛಿನ್ನ ಸಂಶಯಾಃ = ಸಂದೇಹ ಗಂಧ ರಹಿತನು ಎನ್ನುವುದು ಶಂಕರಾಚಾರ್ಯರ ವ್ಯಾಖ್ಯಾನ.

ಈತನು ನಮಗೆ ಸುಲಭನೊ, ಹೌದೋ ಅಲ್ಲವೋ - ಎನ್ನುವ ಭಕ್ತರ ಸಂದೇಹಗಳನ್ನು ಚೂರು ಚೂರು ಮಾಡುವವನು - ಎಂಬುದು ಪರಾಶರ ಭಟ್ಟರ ವ್ಯಾಖ್ಯಾನ. ಗಜೇಂದ್ರ ವೃತ್ತಾಂತವು ಇದಕ್ಕೆ ಉತ್ತಮ ಉದಾಹರಣೆ. ಈ ರೀತಿಯಲ್ಲಿ ಪರಾಶರ ಭಟ್ಟರ ವ್ಯಾಖ್ಯಾನವು ರಸವತ್ತಾದ ಅರ್ಥವನ್ನು ಬೋಧಿಸುತ್ತಾ ಉಪಾದೇಯವಾಗಿ ಒಪ್ಪುವಂತಿದೆ.



# ವೆಂಕಟರಮಣನ ಹೃದಯ ನಿವಾಸಿನಿ

—ಜಿ. ಎಸ್. ಗುಂಡಪ್ಪ.

ವೆಂಕಟರಮಣನ ಹೃದಯನಿವಾಸಿನಿ
ಪದ್ಮಾವತಿಯೇ ನಮೋ ನಮೋ
ಸಂಕಟ ಹಾರಿಣಿ ಶೋಕನಿವಾರಿಣಿ
ಹೇ ನಾರಾಯಣಿ ನಮೋ ನಮೋ

ದೋಷವಿನಾಶಿನಿ ಶಕ್ತಿ ವಿಲಾಸಿನಿ
ರಕ್ಕಸಧ್ವಂಸಿನಿ ನಮೋ ನಮೋ
ಪಾಶವಿಮೋಚನಿ ಕ್ಲೇಶನಿವಾರಿಣಿ
ಮಳೆ ಬೆಳೆಕಾರಿಣಿ ನಮೋ ನಮೋ

ತಿರುಪತಿಕ್ಷೇತ್ರದಿ ವಿಗ್ರಹರೂಪಿಣಿ
ಶಾಂತಿ ಸ್ವರೂಪಿಣಿ ನಮೋ ನಮೋ
ನಿರುಪಮ ಸುಂದರಿ ನಿತ್ಯ ನಿರಂಜನಿ
ಅನಂತ ರೂಪಿಣಿ ನಮೋ ನಮೋ

ಕಲಿಮಲಹಾರಿಣಿ ಸದಮಲ ರೂಪಿಣಿ
ವಿದ್ಯಾದಾಯಿನಿ ನಮೋ ನಮೋ



ತಿರುಮಲ ವಾಸಿನಿ ಲಕ್ಷ್ಮಿಸ್ವರೂಪಿಣಿ
ಸಂಪತ್ಕಾರಿಣಿ ನಮೋ ನಮೋ

ಕಾವ್ಯ ವಿಲಾಸಿನಿ ಕಾರ್ಯ ವಿಪಾಕಿನಿ
ಪದ್ಮವಿಲಾಸಿನಿ ನಮೋ ನಮೋ
ದಿವ್ಯಸುವಾಸಿನಿ ಸ್ಥಿತಿ ಲಯಕಾರಿಣಿ
ವಿಶ್ವ ವಿಲಾಸಿನಿ ನಮೋ ನಮೋ

ಗಿರಿನದಿಕಾರಿಣಿ ಜನಮನ ತೋಷಿಣಿ
ಸಾರಸ ಧಾರಿಣಿ ನಮೋ ನಮೋ
ಸುರನರ ಪೂಜಿತೆ ಶ್ರೀಧರಕಾಂತೆ
ತಿರುಮಲ ಶೋಭಿನಿ ನಮೋ ನಮೋ

ಕೋಟಿಯ ಸಂಖ್ಯೆಯ ಸೂರ್ಯರ ತೇಜವ
ಮೀರಿಹ ಮಾತೆಯೆ ನಮೋ ನಮೋ
ಕೋಟಿಗು ಮೀರಿದ ಬ್ರಹ್ಮಾಂಡಂಗಳ
ಮಹಾಮಾತೆಯೆ ನಮೋ ನಮೋ



# ಸಂಕೀರ್ತನ ಮಾಲೆ

--ಡಾ|| ಟಿ. ಎನ್. ನಾಗರತ್ನ

ಕಣ್ಣು ಕಾಣದು ನಿನ್ನ ನೋಡಲು ಒಳ
ಗಣ್ಣು ತೆರೆಯದು ನಿನ್ನ ಅರಿಯಲು || ಪ ||

ಬಣ್ಣದ ಗಾಜುಗಳ ಕನ್ನಡಕ ನನ್ನದು ನಿನ್ನ
ಬಣ್ಣನೆ ಮಾಡಲರಿಯೆ ನಾನು || ಅ.ಪ. ||

ಸಣ್ಣ ರಂಜದ ಹೂವ ರೂಪು ಸುವಾಸನೆ
ದೇಣ್ಣೆಯ ಬಿಳಿ ನುಣುಪು ಕಂಪು ತಂಪು
ಸುಣ್ಣದ ಕೆನೆಬಣ್ಣ ವೀಳ್ಯದ ಸವಿಖಾರ
ಬಣ್ಣನೆಯ ಮಾತೂ ನಿನ್ನಿಂದಲಂತೆ || ೧ ||

ಹಚ್ಚನೆಯ ಹಸಿರು ದೆಚ್ಚನೆಯ ಉಸಿರು
ಸ್ವಚ್ಛ ಹವೆ ಬಿಸಿಲು ಬೆಳದಿಂಗಳು
ಇಚ್ಛೆ ಅನಿಚ್ಛೆಗಳು ಭಾವಭಾವನೆಗಳು
ಮಚ್ಛಾವತಾರ, ಎಲ್ಲ ನಿನ್ನದಂತೆ || ೨ ||

ಒಡಲಗರಿ ಕಡಲಸಿರಿ ಭೋಗದ್ಭೆಸಿರಿ
ಮಡಿಲ ಮರಿ ತುಡುಗಮೊರಿ ಲಹರಿ ಲಹರಿ
ಸಡಗರದ ಸರಿಗಮವ ಸಿರಿಗಂಗಾಜನಕ
ನುಡಿಪನಂತೆ, ಅವನೆ ನೀನಂತೆ! || ೩ ||

-----

ಕೃಷ್ಣ ಕೃಷ್ಣಾಯೆಂದು ಕಾಮಿನಿ ಕರೆಯಲು
ಅಕ್ಷಯ ವಸನಾಗಿ ಒದಗಿದೆಯೊ ಅಂದು || ಪ ||

ದುಷ್ಟ ದುಶ್ಶಾಸನರ ಹಿಂಡುಹಿಂಡೇ ಇಂದು
ಶಿಷ್ಟ ಮಾನಿನಿಯರ ಮಾನಗಳೆಯುತಿಹುದು || ಅ.ಪ. ||

ಕಣುಚ್ಚೆ ಬಾಯ್ಬಿಗಿದು ಹಾವಿಸ್ಥಾಸಿನಲಿ
ತಣ್ಣಗೆ ಕೈಕಟ್ಟಿ ಕುಳಿತಿಹೆಯಲ್ಲೋ
ಬಣ್ಣನೆಯ ಮಾತಾಡೋ ಕಾಮಿಕೀಚಕರ ನಿಜ
ಬಣ್ಣವನು ಬಯಲು ಮಾಡದೆ ನೀನು || ೧ ||

ಗದ್ದೆ ಬಯಲು ಶಾಲೆ ಕಾಲೇಜುಗಳು
ಶುದ್ಧ ಹಸುಮಗುವಿನ ಮೊದಲ ಶಾಲೆ
ಹದ್ದುಮೀರಿದೆ ಅಲ್ಲೂ ಕಾಮುಕರ ಕಾಟ
ನಿದ್ದೆ ಬಂದಿದೆಯೆ ನಿನಗೆ ಎದ್ದು ಬಾರದಷ್ಟು || ೨ ||

ದೇಡಿದರೆ ಕಾಡಿದರೆ ಬರುವವನಲ್ಲ ನೀನು
ನೋಡುತಿರು ಎಬ್ಬಟ್ಟಿ ಎಳೆತರುವೆ ನಾನು
ಆಡುವೆಯ ಆಟಗಳ ಸಿರಿಗಂಗಾಜನಕ
ಮಾಡುವೆನು ತಕ್ಕುದು ಕಲಿಗಾಲ ಕಂಡ್ಯಾ || ೩ ||

------

ಸೀತೆ ನಿನ್ನ ಕಥೆ ... 
ಮಾತೆ ನಿನ್ನಪಾಡೇ ಹೀಗೆ ನಮ್ಮಹಾಡು ? || ಪ ||

ಹಾರಿಬಂದ ಹನುಮನ ಬೆಂಬಲ
ಕೋರಿಬಂದ ಲಕ್ಷ್ಮಣನ ಛಲ
ಸೇರಿದ ರಾಮನ ತೋಳ್ಗಳ ಸಿನಗಿತ್ತು
ಯಾರಿ... ನಮ್ಮಜೊತೆ || ೧ ||

ರಾವಣನು ...ಕನಾದರೂ
ಸೇವಕ ನಿನ... , ನೀನಾಗಿ ...
ಭಾವುಕರು ಕೀಚಕರು ...ನೆಳೆವಾಗ
ಯಾವಾತ ತಡೆಯುವ... || ೨ ||

ತಾಯಿ ಭೂಮಿ ಅಪ್ಪಿದಳು ನಿನ್ನ
ಸಾಯಿಸುವಲ್ಲಿಂದು ಬಂಧುಗಳೆ ಶಾಮೀಲು
ಕಾಯುವವರಾರೆಮ್ಮ ನೀನೆ ಪುಣ್ಯವಂತೆ
ಕಾಯುವ ಸಿರಿಗಂಗಾಜನಕ ...ಮ್ಮೆ ವೇಳೆ || ೩ ||

----

## ಉಗಾಭೋಗ

ಚಿತೆಯೇರುವವನಕ ಚಿಂತೆ ತಪ್ಪಿದ್ದಲ್ಲ
ರತಿಪತಿಪಿತನೆ ಅನುಭವದ ಮಾತಿದು
ಉಂಡುಡುವ ನೆನಪಿಡುವ ಚಿಂತೆ
(ಕಂಡುದನು ಬಿಡದೆ ಪಡೆವ ಚಿಂತೆ)
ಧನವ ಕೂಡಿಡುವ ನಿಧಿಯ ಕಾಪಿಡುವ ಚಿಂತೆ
ಮನವ ಕಾಡುತಲಿಹುದು ದೆಚ್ಚಿಬೀಳಿಸುತಿಹುದು
ಎನ್ನಯ್ಯ ಸಿರಿಗಂಗಾಜನಕ ಚಿಂತೆ-
ಯನು ಬಿಡಿಸೆ ಪೊರೆ ಚಿಂತಾಯಕನೆ

ಶಬರಿಯೆಂಜಲನುಂಡು ಶಕುತನಾದೆ
ಕಬರಿನೆವಮಾಡಿ ಪಾಂಡವರ ಪೊರೆದೆ
ಇಭರಾಜಗೊಲಿದು ಖಗಪತಿಯನೇರಿ
ಸಭೆಯಲ್ಲಿ ಕಂಸನನು ಸೀಳಿದೆಯೊ ಶೌರಿ
ಅಭಯಪ್ರದನೆ ಅನಾಥರಕ್ಷಕಸ್ವಾಮಿ
ನಿರ್ಭಯ ನಿರಾಮಯ ಸಿರಿಗಂಗಾಜನಕ

------

# ವಿಷ್ಣುಪ್ರಿಯೆ ತುಲಸಿ

—ಅನಂತ ಚಿಂತಾಮಣಿ ಜ್ಯೋತಿಷೀ.

ಭಕ್ತ ಉಪಾಸಕರಿಗೆ ವಿಷ್ಣುವು ಆರಾಧ್ಯದೈವವಾಗಿರುವಂತೆ ಭಗವತಿ ತುಲಸಿಯು ಪೂಜ್ಯೆ ಮತ್ತು ವಂದನೀಯಳೆನಿಸಿದ್ದಾಳೆ. ತುಲಸಿಯು ಶ್ರೀದೇವಿಯಂತೆ ಅನಾದಿಕಾಲದಿಂದ ಭಗವಂತನ ನಿತ್ಯ ಸಹಚರಿಯಾಗಿರುವಳು. ತುಲಸಿಯು ಭಗವಂತನ ನಿತ್ಯಧಾಮವಾದ ಗೋಲೋಕದಲ್ಲಿ ವಿಷ್ಣುವಿನೊಂದಿಗೆ ದೇವಿಯೊಂದಿದ್ದು ಲೀಲಾ ವಿಭೂತಿಯಲ್ಲಿ ರಾಧಿಕೆಯಂತೆ ಸಹಚರಿಯಾಗಿರುವಳು. ವಿಷ್ಣುಪ್ರಿಯೆ, ವಿಷ್ಣುಕಾಂತೆ ಕೇಶವಪ್ರಿಯೆ-ಎಂಬ ಹಲವಾರು ನಾಮಗಳಿಂದ ಖ್ಯಾತಳಾದ ತುಲಸಿಯು ವೃಂದಾವನದಲ್ಲಿ ಗೋಪಿಕಾಸ್ತ್ರೀಯಾಗಿ ಅವತರಿಸಿ ಎಷ್ಟೋಕಾಲದ ತನಕ ತಪವನ್ನಾಚರಿಸಿ ವೃಂದಾವನವಿಹಾರಿಯ ರೂಪದಲ್ಲಿ ಅವತಾರ ತಾಳಿದ ಶ್ರೀಕೃಷ್ಣ ಸ್ವರೂಪಿ ನಾರಾಯಣನನ್ನು ದೊರಕಿಸಿಕೊಂಡಳು. ಕೆಲ ಪುರಾಣಗಳ ಪ್ರಕಾರ ಇವಳು ಜಲಂಧರನ ಪತ್ನಿಯಾಗಿ ಇನ್ನು ಕೆಲ ಪುರಾಣದಂತೆ ಶಂಖಚೂಡನ ಪತ್ನಿಯಾಗಿರುವಳು. ಅವಳ ಶ್ರದ್ಧೆಯು ನಾರಾಯಣನ ಮೇಲೆ ಇದ್ದು ಅವನನ್ನು ಪತಿರೂಪದಲ್ಲಿ ದೊರಕಿಸಲು ತಪವನ್ನು ಮಾಡುತ್ತಿದ್ದಳು. ವೃಂದೆಯಾಗಿ ಜಲಂಧರನ ಪತ್ನಿಯಾಗಿದ್ದಳು. ವಿಷ್ಣು ಪ್ರೇಮದ ಮನಸ್ಥಿತಿಯನ್ನು ಅರಿತುಕೊಂಡ ವಿಷ್ಣುವು ಅವಳನ್ನು ಅನುಗ್ರಹಿಸಿ ಪತ್ನಿಯನ್ನಾಗಿ ಮಾಡಲು 'ಛಲ'ದ ಅಭಿನಯಮಾಡಿದನು. ಇದಕ್ಕಾಗಿ ಕೋಪಗೊಂಡ ವೃಂದೆಯು ಶಿಲೆಯಾಗುವಂತೆ ಶಾಪ ನೀಡಿದ್ದಲ್ಲದೇ ಸ್ವಯಂ ತಾನು ಗಂಡಕಿ ನದಿಯ ರೂಪದಲ್ಲಿ ಪರಿವರ್ತನ ಹೊಂದಿದಳು. ವಿಷ್ಣುವನ್ನು ತನ್ನ ಹೃದಯದಲ್ಲಿ ಧರಿಸಿಕೊಂಡಳು.

ಶಾಲಗ್ರಾಮವು ನಾರಾಯಣ ಸ್ವರೂಪವಾಗಿದ್ದು ತುಲಸಿಯು ಹೊರತಾಗಿ ಪೂಜೆಯು ನಡೆಯಲಾರದು. ಶಾಲಗ್ರಾಮದ ಸ್ನಾನ ನೈವೇದ್ಯ ಆಚಮನ ಚಂದನ ಪುಷ್ಪಮಾಲಾದಿ ಅಲಂಕಾರಗಳೂ - ರಾಜಭೋಗ ಇತ್ಯಾದಿಗಳಲ್ಲಿಯೂ ತುಲಸಿಯ ಅವಶ್ಯವಿದೆ. ಅನೇಕ ಪ್ರಕಾರಗಳ ದಿವ್ಯ ಉಪಕರಣಗಳಾದ ಮೃಷ್ಟಾನ್ನ ಸುಸ್ವಾದು ವ್ಯಂಜನ ಇತ್ಯಾದಿಗಳನ್ನು ತುಲಸಿಯ ಹೊರತು ಆತನು ಸ್ವೀಕರಿಸುವುದಿಲ್ಲ. ಶಾಲಗ್ರಾಮ ಉಪಾಸನೆಯಲ್ಲಿ ನೈವೇದ್ಯಾದಿ ಸಮರ್ಪಣೆಯಲ್ಲಿ ಮಂತ್ರೋಚ್ಚಾರಣೆ ಘಂಟಾನಾದದ ಜೊತೆಗೆ ತುಲಸಿ ಪತ್ರದ ಸಮರ್ಪಣೆಯು ಉಪಾಸನೆಯ ಮುಖ್ಯ ಅಂಗವಾಗಿದೆ. ದೇವ ದೇವಿಯರ ಉಪಾಸನೆಯಲ್ಲಿ ಹೂಗಳೊಂದಿಗೆ ಪತ್ರಗಳೊಂದಿಗೆ ತುಲಸಿ ಸಂಮಿಶ್ರಣವಾಗುವುದರಿಂದ ಆ ದೇವತೆಗಳ ಪ್ರಸನ್ನತೆಯು ಶೀಘ್ರವಾಗಿ ಲಭಿಸುತ್ತದೆ.

ಇಂದಿಗೂ ಕಾರ್ತೀಕ ಮಾಸದೊಳಗೆ ತುಲಸಿ ವಿವಾಹೋತ್ಸವವನ್ನು ಯಥಾವಿಧಿಯಾಗಿ ಆಚರಿಸುತ್ತ ಅನಂತ ಪುಣ್ಯಫಲವನ್ನು ಪಡೆಯುವರು. ತುಲಸಿ ಮಾಹಾತ್ಮ್ಯವು ಪುರಾಣಗಳಲ್ಲಿ ಪಾಂಚರಾತ್ರಗಳಲ್ಲಿದೆ. ತುಲಸಿಯ ಗಿಡವಿರುವಲ್ಲಿ ತುಲಸಿ ವನವಾಗಿ ಅಲ್ಲಿ ಯಮಕಿಂಕರರ ಪ್ರವೇಶವಾಗುವುದಿಲ್ಲ. ತುಲಸಿ ಮಂಜರಿಯಿಂದ ಪೂಜೆ ಮಾಡಿದವರಿಗೆ ಮೋಕ್ಷ ಪ್ರಾಪ್ತಿಯಾಗಿ ಪುನರ್ಜನ್ಮತ್ವ ಉಂಟಾಗುವುದಿಲ್ಲ. ತುಲಸಿ ವೃಕ್ಷದಲ್ಲಿ ಬೇರಿನಿಂದ ಹಿಡಿದ ಅದರ ನೆರಳಿನ ತನಕ ಎಲ್ಲ ದೇವತೆಗಳು ಎಲ್ಲ ತೀರ್ಥಗಳು ವಾಸಿಸುತ್ತವೆ. ಸರ್ವ ಕಲ್ಯಾಣ ಮಂಗಲದ ಅಧಿಷ್ಠಾನವಾದ ತುಲಸಿ ಸನ್ನಿಧಿಯಲ್ಲಿ ದೇವತೆಗಳು ಮೋಕ್ಷ ಪ್ರಾಪ್ತಿಯ ಅಭಿಲಾಷೆ ಹೊಂದುತ್ತಾರೆಂದು ಬ್ರಹ್ಮವೈವರ್ತಪುರಾಣದ ಪ್ರಕೃತಿ ಖಂಡದಲ್ಲಿ ಹೇಳಿದೆ. ನೀರು ತುಂಬಿದ ಕಲಶದಲ್ಲಿ ತುಲಸಿ ಹಾಕಿ ಈ ಪವಿತ್ರೋದಕದಿಂದ ಶಾಲಗ್ರಾಮ ಅಥವಾ ಇತರ ದೇವತೆಗಳಿಗೆ ಅಭಿಷೇಕ ಮಾಡುವುದರಿಂದ ದೇವತೆಗಳಿಗೆ - ಭಗವಂತನಿಗೆ ತೃಪ್ತಿ ಲಭಿಸುತ್ತದೆ. ಈ ತೃಪ್ತಿಯು ಸಾವಿರಾರು ಕೊಡಗಳಿಂದಲೂ ಸಂಭವಿಸುವುದಿಲ್ಲ.

ತುಲಸಿ ವನದಲ್ಲಿ, ತುಲಸಿ ಗಿಡದ ಸಮೀಪದಲ್ಲಿ ಮಾಡಲಾದ ಎಲ್ಲ ಅನುಷ್ಠಾನ ಜಪ ತಪ ರಾಮಾಯಣ ಗೀತಾ ಭಾಗವತಾದಿ ಪಾಠಗಳಿಂದ ಎಲ್ಲ ಕಾಮನೆಗಳು ಪೂರ್ಣಗೊಂಡು ಹೃದಯವನ್ನು ಶುದ್ಧಗೊಳಿಸಿ ಜ್ಞಾನದ ಮೂಲಕ ಭಗವತ್ಪ್ರಾಪ್ತಿ ಮುಕ್ತಿ ದೊರಕುತ್ತವೆ. ತುಲಸಿಗಿಡದ ಕೆಳಗಿನ ಮಣ್ಣು ಪರಮ ಪವಿತ್ರದಾಯಕ. ಈ ಮಣ್ಣನ್ನು ತಲೆಗೆ ಹಚ್ಚುವುದರಿಂದ ಎಲ್ಲ ಪಾಪಗಳ ನಾಶ, ಕಲ್ಯಾಣ ಪ್ರಾಪ್ತಿಯಾಗುತ್ತದೆ. ವೈಷ್ಣವರು ತುಲಸಿ ಮಾಲೆ ಧರಿಸುವುದರಿಂದ ಯಮದೂತರ ಭಯ ಇರಲಾರದು. ವಿಷ್ಣುವಿನ ಮತ್ತು ಅವನ ಎಲ್ಲ ಅವತಾರಗಳ ಹಾಗೂ ದೇವ ದೇವಿಯರ ಮಂತ್ರ ತುಲಸಿ ಮಾಲೆಯ ಮೂಲಕ ಜಪಿಸುವುದರಿಂದ ಸದ್ಯಃ ಸಿದ್ಧಿ ಲಭಿಸುತ್ತದೆ.

ತುಲಸಿಮಾಲೆಯನ್ನು ಸದಾ ಪವಿತ್ರ ಸ್ಥಾನದಲ್ಲಿ ಇಡತಕ್ಕದ್ದು. ಅನೇಕ ನಿಯಮ ಪಾಲಿಸತಕ್ಕದ್ದು. ಶ್ರಾದ್ಧದ ಭೋಜ್ಯ ಪದಾರ್ಥ ಕವ್ಯ ಇತ್ಯಾದಿಗಳಲ್ಲಿ ತುಲಸಿ ಪ್ರಯೋಗದಿಂದ ಪಿತರರಿಗೆ ಅಕ್ಷಯ ತೃಪ್ತಿ ಲಭಿಸುತ್ತದೆ. ಪ್ರಾಣಾಂತ ವೇಳೆಯಲ್ಲಿ ಮುಖದಲ್ಲಿ ತುಲಸಿ ಗಂಗಾಜಲ ಹಾಕುವ, ಸುವರ್ಣವಿಡುವ ಪರಂಪರೆಯಿದ್ದು ಇದರಿಂದ ವಿಷ್ಣು ಸಾಯುಜ್ಯವು ದೊರಕುತ್ತದೆ. ಯಾವನ ಮೃತದೇಹವನ್ನು ತುಲಸಿ ಕಾಷ್ಠದಿಂದ ಸುಡಲಾಗುತ್ತದೆಯೋ ಅವನಿಗೆ ವಿಷ್ಣು ಲೋಕವು ಸಿಗುತ್ತದೆ. ಮೃತಪುರುಷನ ಸಂಪೂರ್ಣ ಅಂಗದ ಮೇಲೆ ತುಲಸಿಕಾಷ್ಠ ಇಡುವ ನಂತರ ದಾಹ ಸಂಸ್ಕಾರವನ್ನು ಮಾಡಿದರೆ ಪಾಪಮುಕ್ತನಾಗುವನು. ದಾಹಸಂಸ್ಕಾರದ ವೇಳೆಗೆ ಇತರ ಕಟ್ಟಿಗೆಗಳ ಒಳಗೆ ತುಲಸಿಯ ಒಂದಾದರೂ ಕಾಷ್ಠವನ್ನು ಇಟ್ಟರೂ ಕೂಡ ಆತನು ಕೋಟಿ ಪಾಪಗಳನ್ನು ಮಾಡಿದರೂ ಮುಕ್ತಿಹೊಂದುವನು. ತುಲಸಿ ಎಲೆ, ಹೂವು, ಬೀಜ, ಬೇರು, ಟೊಂಗೆ, ತೊಗಟೆ ಗಂಟು (ಸ್ಕಂಧ) ಮೊದಲಾದವುಗಳು ಪಾವನವಾಗಿವೆ. ತುಲಸಿಯ ನಾಮೋಚ್ಚಾರಣೆ ಮಾಡುವುದರಿಂದ ವಿಷ್ಣುವು ಪ್ರಸನ್ನನಾಗಿ ಪುಣ್ಯಪ್ರಾಪ್ತಿ ಮಾಡುವನು. ತುಲಸಿಯ ಸಹಿತ (ಮಧುಸೂದನ) ಶಾಲಗ್ರಾಮ ಪೂಜೆ ಮಾಡುವುದರಿಂದ ಭಗವದ್ಭಕ್ತ ನರನಿಂದ ನಾರಾಯಣನಾಗುವನು.

ಶಾರೀರಕ ಮಾನಸಿಕ ರೋಗಗಳಿಗೆ ತುಲಸಿಯು ರಾಮಬಾಣದ ಔಷಧವಾಗಿದೆ. ಕೀಟಾಣುನಾಶಕ ಶಕ್ತಿಯು ತುಲಸಿಗಿಡದಲ್ಲಿದ್ದು ರೋಗಗಳನ್ನು ಉತ್ಪಾದಿಸುವ ತತ್ವಗಳಾಗಲೀ ಜೀವ ಜಂತುಗಳಾಗಲೀ ತುಲಸಿಯ ಸಮೀಪಕ್ಕೆ ಪ್ರವೇಶಿಸಲಾರದು. ತುಲಸಿಯನ್ನು ಆಕಳ ಮೊಸರಿನ ಜೊತೆ ಹೆಚ್ಚಗಿನ ಪ್ರಮಾಣದಲ್ಲಿ ಸೇವಿಸಿದರೆ ಅಸಾಧ್ಯವೆನಿಸುವ ರೋಗಗಳು ನಾಶಹೊಂದುತ್ತವೆ.

ಈ ಪ್ರಕಾರವಾಗಿ ವಿಷ್ಣುಪ್ರಿಯೆ ತುಲಸಿಯು ಎಲ್ಲ ಪ್ರಕಾರಗಳಿಂದ ಲೋಕೋಪಕಾರವಾಗಿದೆ. ವಾಯುಮೂಲಕ ಸಂಚರಿಸಿ ಸುದೂರದ ತನಕ ವಾಯುಮಂಡಲದ ಎಲ್ಲ ಪ್ರಕಾರಗಳ ಪ್ರದೂಷಣಗಳನ್ನು ದೂರೀಕರಿಸಿ ಸಾತ್ವಿಕವನ್ನಾಗಿ ಮಾಡುತ್ತದೆ. ತುಲಸಿ ಎಲೆ, ಮಂಜರಿ, ಕಾಷ್ಠ, ಮೃತ್ತಿಕೆ - ಮೊದಲಾದವುಗಳು ಲಾಭದಾಯಕವಾಗಿವೆ.

ಪರ್ಯುಷಿತ (ಹಳಸಿದ ಹಳೆಯ) ಸಂಗತಿಗಳ ಕುರಿತು ತುಲಸಿದಲವಿಟ್ಟಲ್ಲಿ ಪವಿತ್ರತೆ ಹೊಂದುತ್ತದೆ.

ವರ್ಜ್ಯಂ ಪರ್ಯುಷಿತಂ ಪುಷ್ಪಂ  
ವರ್ಜ್ಯಂ ಪರ್ಯುಷಿತಂ ಜಲಮ್  
ನ ವರ್ಜ್ಯಂ ತುಲಸೀ ಪತ್ರಂ  
ನ ವರ್ಜ್ಯಂ ಜಾಹ್ನವೀ ಜಲಮ್

ಸಿಯು ಮತ್ತು ಗಂಗಾಜಲವು ಎಂದೆಂದಿಗೂ ಪರಮ ಪವಿತ್ರವಾಗಿವೆ.

ಭಾನುವಾರ ಅಮಾವಾಸ್ಯೆ ದ್ವಾದಶೀ ಸಂಕ್ರಾಂತಿ ದಿನಗಳಲ್ಲಿ ತುಲಸೀಚಯನ ನಿಷಿದ್ಧವಾಗಿದೆ. ಈ ದಿನಗಳಲ್ಲಿ ವಿಷ್ಣು ಪೂಜನಕ್ಕಾಗಿ ಹಿಂದಿನ ದಿನಗಳಲ್ಲಿ ತೆಗೆಯತಕ್ಕದ್ದು. ಗ್ರಹಣದ ವೇಳೆಯಲ್ಲಿ ಅರ್ಧರಾತ್ರೆಯ ನಂತರ ೩ ಘಂಟೆ ತನಕ ತೆಗೆಯಕೂಡದು. ದೇವಕಾರ್ಯ ಮತ್ತು ಪಿತೃಕಾರ್ಯಗಳಲ್ಲಿ ಸ್ನಾನ ಮಾಡಿಕೊಂಡೇ ತುಲಸಿ ಪತ್ರ ತೆಗೆಯದೇಕು.

ಅಸ್ನಾತ್ವಾ ತುಲಸೀಂ ಚಿತ್ವಾ
ಯಃ ಪೂಜಾಂ ಕುರುತೇ ನರಃ
ಸೋಽಪರಾಧೀ ಭವೇತ್ ಸತ್ಯಂ
ತತ್ ಸರ್ವಂ ನಿಷ್ಫಲಂ ಭವೇತ್

ಎಂದು ವಾಯುಪುರಾಣದಲ್ಲಿ ಹೇಳಿದೆ. ಯಾವನು ಸ್ನಾನ ಮಾಡದೆ ತುಲಸಿ ಚಯನ ಮಾಡಿ ಅದರಿಂದ ಪೂಜೆ ಮಾಡುವನೋ ಆತನು ನಿಶ್ಚಯವಾಗಿ ಅಪರಾಧಿಯಾಗುವನು. ಅವನ ಎಲ್ಲ ಪೂಜೆ ನಿಷ್ಫಲದಾಯಕ.

ಶುಚಿಯಾಗಿದ್ದುಕೊಂಡು ಪೂಜೆಗಾಗಿ ತೆಗೆಯುತ್ತೇನೆ ಎಂದು ಪ್ರಾರ್ಥಿಸಬೇಕೆಂದು ಪದ್ಮಪುರಾಣವು ಹೇಳುತ್ತದೆ. ತುಲಸಿಯ ಧ್ಯಾನದಲ್ಲಿ ಸರ್ವಪಾಪಗಳನ್ನು ನಶಿಸುವ ಅಬಾಧಾ ಶಕ್ತಿಯಿರುತ್ತದೆ.

ವೃಂದಾ ವೃಂದಾವನೀ
ವಿಶ್ವ ಪೂಜಿತಾ ವಿಶ್ವಪಾವನೀ
ಪುಷ್ಪಸಾರಾ ನಂದಿನೀ ಚ
ತುಲಸೀ ಕೃಷ್ಣಜೀವನೀ
ಏತನ್ನಾಮಾಷ್ಟಕಂ ಚೈವ
ಸ್ತೋತ್ರಂ ನಾಮಾರ್ಥ ಸಂಯುತಮ್
ಯಃ ಪಠೇತ್ತಾಂ ಚ ಸಂಪೂಜ್ಯಾ
ಸೋಽಶ್ವಮೇಧ ಫಲಂ ಲಭೇತ್

ಎಂದು ದೇವಿಭಾಗವತದಲ್ಲಿ ಹೇಳಿದೆ ವೃಂದಾ, ವೃಂದಾವನೀ ವಿಶ್ವಪೂಜಿತಾ, ವಿಶ್ವಪಾವನೀ, ಪುಷ್ಪಸಾರಾ, ನಂದಿನೀ, ತುಲಸೀ, ಕೃಷ್ಣ ಜೀವನೀ ಇವು ತುಲಸಿಯ ನಾಮಾಷ್ಟಕಗಳಾಗಿದ್ದು ತುಲಸಿಯ ಪೂಜೆಮಾಡಿ ನಾಮಾಷ್ಟಕ ಪಠಿಸುವುದರಿಂದ ಅಶ್ವಮೇಧ ಯಜ್ಞದ ಫಲವು ಪ್ರಾಪ್ತವಾಗುತ್ತದೆ.

ಸ್ಪೃಷ್ಟಾವ ಪುಷ್ಟಾವನೀ
ರೋಗಾಣಾಮಭಿವಂದಿತಾ
ನಿರಸನೀ ಸಿಕ್ತಾನ್ತತ್ರಾಸನೀ
ಪ್ರತ್ಯಾಸಕ್ತಿವಿಧಾಯಿನಿ ಭಗವತಃ
ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿ ಫಲದಾ
ತಸ್ಯೈ ತುಲಸ್ಯೈ ನಮಃ

(ಪದ್ಮಪು. ಪಾ. ೭೭-೬೭)

ಯಾವಳು ದರ್ಶನಪಥದಲ್ಲಿ ಬರುವುದರಿಂದ ಎಲ್ಲ ಪಾಪ ಸಮುದಾಯವನ್ನು ನಾಶಮಾಡುವಳೋ, ಸ್ಪರ್ಶಿಸುವುದರಿಂದ ದೇಹವನ್ನು ಪವಿತ್ರತರ ಮಾಡುವಳೋ, ಯಾವಳಿಗೆ ನಮಿಸುವುದರಿಂದ ರೋಗಗಳನ್ನು ನಿವಾರಿಸುವಳೋ ನೀರು ಯಮರಾಜನಿಗೂ ಭಯ ಮುಟ್ಟಿಸುತ್ತದೋ, ಯಾವಳನ್ನು ಅರ್ಪಿಸುವುದರಿಂದ ಭಗವಾನ್ ಕೃಷ್ಣನ್ ಹತ್ತಿರ ಕೊಂಡೊಯ್ಯುವಳೋ ಮತ್ತು ಭಗವಚ್ಚರಣದಲ್ಲಿ ಏರಿಸುವುದರಿಂದ ಮೋಕ್ಷರೂಪದ ಫಲ ನೀಡುವಳೋ ಆ ತುಲಸಿದೇವಿಗೆ ನಮಸ್ಕಾರ. 

## ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

*ಶ್ರೀ ಗೋವಿಂದರಾಜಸ್ವಾಮಿ ದೇವಾಲಯ*
*ಶ್ರೀ ಕೋದಂಡರಾಮಸ್ವಾಮಿ ದೇವಾಲಯ*
*ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು*
*ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ*
*ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ*

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು. (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ 6-00, ಬೆಳಗ್ಗೆ 10-00, ಸಂಜೆ 3-00

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ ರೂ. 20/- ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇ.**

# ಪರಮ ವೈಕುಂಠ

---ಸಿ. ಗೋವಿಂದಾಚಾರ್.

ಲೌಕಿಕದ ಎಲ್ಲಾ ಸಂಘಟಿತ ಸಂಸ್ಥೆಗಳಲ್ಲಿ ನಿಯಮ, ನಿಯಂತ್ರಣ, ನಿರ್ದೇಶನ ಹಾಗೂ, ಅಧಿಕಾರ ಚಲಾಯಿಸುವುದಕ್ಕಾಗಿ ಕೇಂದ್ರಾಡಳಿತ ಕಛೇರಿ ಅಥವಾ ಕೇಂದ್ರ ನಿಲಯಗಳಿರುವಂತೆ ಭಗವಂತನಿಗೂ ನಿತ್ಯ ವಿಭೂತಿ ಅಥವಾ ಭೋಗ ವಿಭೂತಿ ಎಂದೂ, ಸೃಷ್ಟಿಸ್ಥಿತ್ಯಾದಿ ವ್ಯಾಪಾರಗಳಿಗಾಗಿ ಲೀಲಾ ವಿಭೂತಿ ಎಂಬ ನೆಲೆಗಳುಂಟು. ಇತರರು ಮಾಡುವ ಕೈಂಕರ್ಯದಿಂದಲೇ ತೃಪ್ತಿಯನ್ನು ಹೊಂದಿ ಆನಂದಿಸುವುದರಿಂದ ಭೋಗ ವಿಭೂತಿ ಎಂದು ಹೆಸರು. ಸಾಮಾನ್ಯ ಭಾಷೆಯಲ್ಲಿ ನಿತ್ಯ ವಿಭೂತಿಯನ್ನು ವೈಕುಂಠ ಎಂದು ಕರೆಯುವರು. ಮಹಾವಿಷ್ಣುವಿನ ಧಾಮವಾದ ಪರಮ ಪದವೇ ಮೂಲ ವೈಕುಂಠ. ನಿತ್ಯವಿಭೂತಿಯಲ್ಲಿ ಶ್ವೇತ ದ್ವೀಪ ಅಯೋಧ್ಯಾ, ಪ್ರಮೋದ ಮುಂತಾದ ವೈಕುಂಠ. ದೋಷ, ಆತಂಕ, ಅಜ್ಞಾನ ಇಲ್ಲದವನು, ಕುಂಠಿತನಾಗದೆ ಇರುವವನು, ತಡೆಯಿಲ್ಲದ ಗತಿ ಉಳ್ಳವನು ವಿಕುಂಠ- ವೈಕುಂಠನು ಎಂದೂ, 'ವೈ' ಎಂಬ ಪದವು ಎಲ್ಲರನ್ನು ಒಟ್ಟಿಗೆ ಸೇರಿಸುವವನು ಎಂದು ಅರ್ಥಗಳಿವೆ. 'ಮಾಯೆ' ಎಂಬ ಅರ್ಥವೂ ಇದೆ. ಆಳ್ವಾರರು 'ವೈಹುಂದಾ', 'ವೈಕುಂಟಾಮಣಿವಣ್ಣಾ', 'ವಿಣ್ಣೋರ್ ಪೆರುಮಾನ್' ಎಂದು ಸಂಬೋಧಿಸಿರುತ್ತಾರೆ. "ವಿಭೂತಿ" ಎಂದರೆ (ಅ) ನಿಯಮನ ವಿಶೇಷ (ಶ್ರೀಭಾಷ್ಯ), (ಆ) ಯಾವರೀತಿಯಲ್ಲಿ ಷಡ್ಗುಣಗಳು ಅಭಿವ್ಯಕ್ತವಾಗಿವೆ, (ಇ) ಪಂಚವ್ಯೂಹಗಳಲ್ಲಿ ಪರರೂಪ ಯಾವ ರೀತಿಯಲ್ಲಿದೆ. ತಿರುವಾಯ್‌ಮೊಳಿಯ ೨-೬-೧ ರಲ್ಲಿ "ಐವಾಯ್ ಅರವಣೈಮೇಲ್ ಆಳಿಪೆರುಮಾನಾರ್" ಎಂದು ಮಾರನರು ಹೇಳಿದ್ದಾರೆ. ಅಮೃತವೂ ಕ್ಷೇಮವೂ ಅಭಯವು ಆಗಿರುವ ತ್ರಿಪಾದ್ವಿಭೂತಿಯೇ ಪರಮ ವೈಕುಂಠ ಎಂದು ಭಾಗವತದಲ್ಲಿದೆ.

ಅಮೃತಂ ಕ್ಷೇಮಂ
ಅಭಯಂ ತ್ರಿಮೂರ್ಧಾ

ಅಮೃತಂ ಎಂದರೆ ಅನಂತಾಸನ, ಕ್ಷೇಮಂ ಎಂದರೆ ವೈಕುಂಠ ಅಭಯಂ ಎಂದರೆ ಶ್ವೇತ ದ್ವೀಪ ತ್ರಿಮೂರ್ಧಾ ಎಂದರೆ ತ್ರಿಮೂರ್ತಿಗಳಲ್ಲಿ ಶ್ರೇಷ್ಠನಾದ ವಿಷ್ಣು. "ನಾರಣನ್ ಮುಳುಮೇಳುಲಹುಕುಂನಾದನ್" (೨-೭-೨) ಇದೇ ಅವನ ಸ್ವರೂಪಾಂಶ. ವೈಕುಂಠದಲ್ಲಿ ಭಗವಂತನದು ಸ್ವಯಂ ಸಿದ್ಧವಾದ ರೂಪ. ನಿತ್ಯಸೂರಿಗಳಿಗೆ ಸೇವೆಯನ್ನು ಕೊಡುವ ರೂಪಕ್ಕೆ ಪರರೂಪ ಎಂದು ಹೆಸರು. ಇದನ್ನೇ ಮಾರನರು ನಿತ್ಯಸೂರಿಗಳ ಸ್ವಾಮಿಯೇ (ದೈವಕ್ಕೊಮಾನ್ಶೈ) ನಾಯಕನೇ, ನಿರ್ವಾಹಕನೇ ಎಂದು ಹೇಳಿರುತ್ತಾರೆ (೮-೪-೧೦). ಪರಮ ಪದ ವೈಕುಂಠವು ಎಲ್ಲಾ ಬಗೆಯ ಭ್ರಮೆಗಳನ್ನು ಮೀರಿ ಏಕರೂಪವಾಗಿರುತ್ತೆ, ಹಾಗೂ ನಿರ್ವಿಕಾರವಾಗಿರುತ್ತೆ. ಇದು ಯಾವಾಗಲೂ ಸತ್ವಗುಣ ಹೊಂದಿರುವುದರಿಂದ ಶುದ್ಧ ಸತ್ವವೆಂದೂ ಹೆಸರು. ಈ ಸ್ಥಾನ ನಿತ್ಯವಾದುದು ಸ್ವಯಂ ಪ್ರಕಾಶವಾದುದು, ಅಕ್ಷರ ಅಥವಾ ನಾಶರಹಿತವಾದುದು, ರಜಸ್ತಮೋಗುಣಗಳಿಗೆ ಅವಕಾಶವಿಲ್ಲ (ರಾಮಾನುಜರ 'ವೇದಾರ್ಥ ಸಂಗ್ರಹ') 'ವೈ' ಎಂಬ ಪದ ಜ್ಞಾನವಿಕಾಸ ಉಂಟುಮಾಡುವ ಪರಮವ್ಯೋಮ 'ತೆಳಿವಿಶುಂಬಿಲೆ' ಎಂದೂ ಇಲ್ಲಿ ಕರಚರಣಾದಿಗಳೊಂದೂ ಇಲ್ಲದೆ ಅಪ್ರಾಕೃತವಾದ ಶುದ್ಧ ಸತ್ವಮಯವಾದ ಸ್ಥೂಲ ರೂಪ ಒಂದಿದೆ. ಇಲ್ಲಿರುವ ಶರೀರಗಳೆಲ್ಲವೂ ಅಪ್ರಾಕೃತವಾದುದು ಎಂದು ತೂಪ್ಪಿಲ್ ಅಮ್ಮಾನರು ತಮ್ಮ ಮೇರುಕೃತಿ ರಹಸ್ಯತ್ರಯಸಾರದ ಉಪೋದ್ಘಾತ ಹಾಗೂ ಪರದೇವತಾ ಪಾರಮಾರ್ಥ್ಯಾಧಿಕಾರತ್ವದಲ್ಲಿ ವಿವರಿಸಿರುತ್ತಾರೆ. ಶ್ರುತಿಯಲ್ಲಿಯೂ ಅ) ಅಕ್ಷರೇ ಪರಮೇ ವ್ಯೋಮನ್, ಆ) ರಜಸಃ ಪರಾಕೆ ತಮಸಃ ಪರಸ್ತಾತ್ ಎಂದು ಉಲ್ಲೇಖಗಳಿವೆ.

## ಎಲ್ಲಿದೆ ?

"ವೈಕುಂಠೇತು ಪರೇಲೋಕೆ" -- ಮೂಲವೈಕುಂಠವು ಪ್ರಾಕೃತವಾದ ಲೀಲಾವಿಭೂತಿಗಿಂತ ಪ್ರತ್ಯೇಕ ಹಾಗೂ ಶ್ರೇಷ್ಠವಾದುದು. ಪ್ರಕೃತಿ ಮಂಡಲ ಮೀರಿರುವುದರಿಂದ 'ಆದಿತ್ಯವರ್ಣಂ ತಮಸಃ ಪರಸ್ತಾತ್' ಆಂಡಾವರ್ತಿ ಲೋಕವಲ್ಲದ್ದರಿಂದ 'ಅಂಡಂ ಭಿತ್ವಾತಥೋದ್ಗತ' ಪರವಾಸುದೇವನಿರುವ ಬಹುದೊಡ್ಡದೇಶವೇ 'ಬ್ರಹ್ಮಲೋಕ' ಎಂದು ಪ್ರಶ್ನೋಪನಿಷತ್ತು, 'ಏಕಮೂರ್ತಿ' ಎಂದು ಭಕ್ತಿಸಾರರ ತಿರುಚೆನ್ನ ವಿರುತ್ತಂ (೧೭) ಹೇಳುವುವು. ಈ ಪರಮಾಕಾಶವು ತ್ರಿಗುಣ ಪ್ರಕೃತಿಯ ಮೇಲ್ಭಾಗದಲ್ಲಿದೆ. ಮಹಾಭಾರತದ ಪ್ರಕಾರ ವೈಕುಂಠವು ಕ್ಷೀರಸಾಗರದ ಉತ್ತರಭಾಗದಲ್ಲಿ ಮೇರು ಪರ್ವತಕ್ಕಿಂತ ೬೨ ಸಾವಿರ ಯೋಜನಗಳಷ್ಟು ದೂರದಲ್ಲಿದೆ.

"ಕ್ಷೀರೋದಧೇರ್ಯೋತ್ತರ ಮೇರೋ
ಸಹಸ್ರೈ ಸಹಯೋಜನಾಂ"

ಪರಂಧಾಮವು ಭೂಮಿಯಿಂದ ೧೭ ಕೋಟಿ ಯೋಜನಗಳಷ್ಟು ದೂರವಿದೆ. ಇಲ್ಲಿ ಅಯೋಧ್ಯಾ ಎಂಬ ದಿವ್ಯನಗರವೂ ಇದೆ ಎಂದು ವಾದಿರಾಜ ತೀರ್ಥರು ವರ್ಣಿಸಿರುತ್ತಾರೆ. ೧೪ ಲೋಕಗಳನ್ನೊಳಗೊಂಡ ಬ್ರಹ್ಮಾಂಡವನ್ನು ಅದರ ಸುತ್ತಲೂ ಅದಕ್ಕೆ ೧೦ ರಷ್ಟು ದೊಡ್ಡದಾದ ೭ ಆವರಣಗಳನ್ನೂ, ಎಲ್ಲ ಸೃಷ್ಟಿಯನ್ನು ದಾಟಿದರೆ ಸಿಗುವುದೇ ಪರಮ ವ್ಯೋಮ. ಆದಿತ್ಯಮಂಡಲದಲ್ಲಿ ತಪೋ ಲೋಕಕ್ಕೆ ಮೇಲ್ಪಟ್ಟಾಗಿದೆ. ಬ್ರಹ್ಮಲೋಕ ಭೂಲೋಕದಿಂದ ೮ ಕೋಟಿ ಯೋಜನಗಳ ಮೇಲಿದೆ ಎಂದು ಹೇಳಲಾಗಿದೆ. ಊಹೆಗೂ ಮೀರಿದ ದೂರವಿರುವುದರಿಂದ ಬ್ರಹ್ಮಾದಿಗಳಿಗೂ, ವಾಕ್ಕಿಗೂ ಮನಸ್ಸಿಗೂ ಎಟುಕದ ವೈಕುಂಠವು ಸಾಮಾನ್ಯರ ದೃಷ್ಟಿಯಲ್ಲಿ 'ಕಾಲ್ಪನಿಕ'ವಾಗಿದೆ. ಅಂದಮೇಲೆ ಇದು ಜ್ಞಾನಿಗಳ ವಿಷಯವಾಗಿದೆ. ಅಂದರೆ ಇದು ಕಾಲ್ಪನಿಕವಲ್ಲ, ಯೋಗ ಮಹಿಮೆಯಿಂದ ಸಾಕ್ಷಾತ್ಕೃತವಾದುದು ಎಂದು ಅರ್ಥ. ಉಳಿದ ಎಲ್ಲಾ ಸ್ಥಾನಗಳಿಗಿಂತ ಅತಿಶಯ ಹೊಂದಿರುವುದರಿಂದ ವೈಕುಂಠವನ್ನು 'ನಿರತಿಶಯ' ಎಂದೂ ಅದರ ಮಹಿಮೆಯನ್ನು 'ಏತೇ ವೈನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ' ಎಂದು ಶರಣಾಗತಿ ಗದ್ಯದಲ್ಲಿ (ಯತಿರಾಜರು) ಅ) 'ತದ್ವಿಷ್ಣೋಃ ಪರಮಂ ಪದಂ ಸದಾಪಶ್ಯಂತಿ ಸೂರಯಃ, ಆ) ದಿವ್ಯಂ ಸ್ಥಾನಂ ಅಜರಂ ಚಾ ಪ್ರಮೇಯಂ' ಎಂದು ಶ್ರುತಿಯಲ್ಲಿ ಉಲ್ಲೇಖಗಳಿವೆ.



## ಹೇಗಿದೆ ?

ಮೂಲ ವೈಕುಂಠವನ್ನು ಜ್ಞಾನಿಗಳಾದ ನಮ್ಮಾಳ್ವಾರರು, ರಾಮಾನುಜರು, ಜಗನ್ನಾಥದಾಸರು, ವಾದಿರಾಜತೀರ್ಥರು ತಮ್ಮಲ್ಲಿರುವ ಪರಜ್ಞಾನ ಶಕ್ತಿಯಿಂದ ಕಂಡು ಇದ್ದದು ಇದ್ದಂತೆಯೇ ವರ್ಣಿಸಿರುವ ಕೃತಿಗಳ ಆಧಾರದಿಂದ ವೈಕುಂಠ ಹೇಗಿದೆ ಎಂದು ವಿವರಿಸಲು ಸಾಧ್ಯವಾಗಿದೆ. ವೈಕುಂಠನಗರವು ೧೨ ಆವರಣಗಳಿಂದ ಕೂಡಿ ಗೋಪುರ ಪ್ರಾಕಾರಗಳಿಂದ ಆವೃತವಾಗಿದೆ. ಈ ಆವರಣದ ಮಧ್ಯಭಾಗದಲ್ಲಿ ಆನಂದ ನಾಮಕ ದಿವ್ಯಾಲಯ ಒಂದಿದೆ. ಇದರಲ್ಲಿ ಸಾವಿರ ಸ್ತಂಭಗಳುಳ್ಳ ರತ್ನಮಯವಾದ ಮಹಾ ಮಂಟಪದಲ್ಲಿ, ಅನಂತ ಭೋಗದಲ್ಲಿ, ದಿವ್ಯಸಿಂಹಾಸನದಲ್ಲಿ ಅಷ್ಟದಳರೂಪದಲ್ಲಿರುವ ಆದಿಶೇಷನ ಮೇಲೆ ಶ್ರೀ ಭೂ ನೀಳಾದೇವಿಯರ ಸಮೇತ ಚತುರ್ಭುಜನಾದ ಮಹಾವಿಷ್ಣುವು ವಿಜಯಾಸನನಾಗಿ (ಎಡಗಾಲನ್ನು ಇಳಿಬಿಟ್ಟು ಬಲಗೈಯನ್ನು ಬಲ ಮಂಡಿಯ ಮೇಲಿಟ್ಟು) ಮಂದಹಾಸದ ನೋಟದಿಂದ ವಿರಾಜಮಾನವಾಗಿದ್ದಾನೆ. ಅಪ್ರಾಕೃತವಾದ ಈ ರತ್ನಮಯ ಮಂಟಪವನ್ನು ರಾಮಾನುಜರು 'ಭೋಗಸ್ಥಾನ' ಎಂದೂ, ನಮ್ಮಾಳ್ವಾರು 'ಮಾಮಣಿಮಂಡಬಂ' ಎಂದೂ ಛಾಂದೋಗ್ಯ (೮-೫-೩) 'ಹಿರಣ್ಮಯಂ' ಎಂದೂ, 'ಸಹಸ್ರಸ್ಥೂಣೇ ವಿಮೃತೇ ದೃಢ ಉಗ್ರೇಯತ್ರ ದೇವಾನಾಂ ಅದಿದೇವ ಅಸ್ತಿ' ಎಂದು ವೇದೋಪನಿಷತ್ತುಗಳು ಕೊಂಡಾಡುವುವು. ಆ ದಿವ್ಯಮಂಟಪವು ಬೃಹತ್ಪ್ರಾಕಾರವಾಗಿಯೂ ಹಾಗೂ ಬೃಹತ್ಪ್ರಕಾಶ ಉಳ್ಳದ್ದು. ಅಲ್ಲಿ ಅಗ್ನಿ, ಸೂರ್ಯಚಂದ್ರರ ಪ್ರಕಾಶವಾಗಲೀ ಇರುವುದಿಲ್ಲ ಎಂದು ಗೀತೆ (೧೫-೬) ಹೇಳಿದೆ. ಈ ಮುತ್ತು ಮಂಟಪಕ್ಕೆ ೪ ದ್ವಾರಗಳಿವೆ. ಚಂಡ-ಪ್ರಚಂಡರು, ಭದ್ರ-ಸುಭದ್ರರು, ಜಯ-ವಿಜಯರು ಹಾಗೂ ಧಾತ್ರ-ವಿಧಾತ್ರರು ಎಂಬ ದ್ವಾರಪಾಲಕರು ಇರುವರು. ಇವರ ಅನುಮತಿ ಪಡೆದೇ ಒಳಗೆ ಹೋಗಬೇಕು.

(ಅ) 'ಕೊಡಿತ್ತೋರಣಂ ವಾಶಲ್ ಕಾಪ್ಪಾನೇ' ಎಂದು ಆಂಡಾಳ್ ಮಾತೆ ತಿರುಪ್ಪಾವೈಯಲ್ಲಿ ಧ್ವನ್ಯರ್ಥ ಹೇಳಿರುತ್ತಾಳೆ.

(ಆ) ಚಂಡಾದಿ ದ್ವಾರಪಾಲೇಭ್ಯೋ ನಮಃ

(ಇ) ಚಂಡ ಪ್ರಚಂಡ ಮುಖತಃ ಪ್ರಣಮಾಮಿ ರಂಗದ್ವಾರ ಪಲೀಷ ಚತಸ್ರಷ್ವಧಿಕಾರ ಭಾಜಃ ಎಂದು ಆಗಮಶಾಸ್ತ್ರಗಳಲ್ಲಿ.

(ಈ) ನೆಡುವರ್ಕೈತ್ತೋರಣಂ ನಿರೈತ್ತು ಕೊಡಿಯಣಿ ನೆಡುಮದಿಳ್ ಗೋಪುರಂ ಎಂದು ನಮ್ಮಾಳ್ವಾರರ (೧೦-೩-೪) ತಿರುವಾಯ್‌ಮೊಳಿಯಲ್ಲಿ ವರ್ಣನೆ ಇದೆ.

ರಾಮಾನುಜರ ವೈಕುಂಠಗದ್ಯ ವರ್ಣಿಸುವುದು-

ಶತಸಹಸ್ರ ಆವರಣಗಳಿಂದ, ದಿವ್ಯ ಉದ್ಯಾನವನಗಳಿಂದ ಶೋಭಿತವಾದ ಆ ದೊಡ್ಡಮಂಟಪ ಎಂಥಾದ್ದೆಂದರೆ - ಒಂದು ಕಡೆ ಮಲ್ಲಿಗೆ ಜಾಜಿ ಪಾರಿಜಾತ ಪುಷ್ಪಗಳ ಸಮೂಹ, ಇನ್ನೊಂದು ಕಡೆ ಕ್ರೀಡಾಶೈಲಗಳಿಂದ ಕೂಡಿ ರತ್ನಾದಿಗಳಿಂದ ನಿರ್ಮಿತವಾದ ಲೀಲಾಮಂಟಪ, ಗಿಣಿಗಳಗುಂಪು, ಅಲ್ಲಲ್ಲಿ ನವಿಲುಗಳ ಕೋಮಲ ಧ್ವನಿ, ಅಮೃತಮಯವಾದ ತೀರ್ಥಗಳ ಸರೋವರಗಳು, ಅಪೂರ್ವವಾದ ನದಿ ಕೊಳಗಳು, ಮುತ್ತು ಮಾಣಿಕ್ಯ ಹವಳಗಳ ಮೆಟ್ಟಿಲುಗಳಿಂದ ಕೂಡಿದ ಉದ್ಯಾನವನಗಳು ಇದನ್ನು ಸುತ್ತುವರೆದಿರುವ ಉನ್ಮಾದಗೊಳಿಸುವ ಕ್ರೀಡಾಸ್ಥಾನಗಳು, ಇವುಗಳಲ್ಲಿ ಕೆಲವು ಲಕ್ಷ್ಮಿಯ ವಿಹಾರಕ್ಕೂ ಇನ್ನು ಕೆಲವು ನಾರಾಯಣನ ಲೀಲಾ ವಿಹಾರಕ್ಕೂ ಯೋಗ್ಯವಾಗಿರುವಂಥವು, ನಾನಬಗೆಯ ಪುಷ್ಪಗಳ ಜೇನನ್ನು ಕುಡಿದು ಮದಿಸಿದ ದುಂಬಿಗಳ ಸಮೂಹ, ಅಲ್ಲಲ್ಲಿ ಹಂಸಸಮೂಹ, ಎಲ್ಲೆಲ್ಲೂ ದಿವ್ಯ ಗಂಧರ್ವಗಾನ, ಚಂದನ ಅಗರು ಕರ್ಪೂರಗಳ ಪರಿಮಳ ಮೆಲ್ಲನೆ ಬೀಸುವ ಗಾಳಿ- ಇನ್ನೂ ಮುಂತಾದ ಅದ್ಭುತ ಹಾಗೂ ಸುಂದರ ಪರಿಸರದಿಂದ ಕೂಡಿ ಶೋಭಿಸುತ್ತಿದೆ ಆ ರತ್ನಸಭಾಮಂಟಪ.

## ಇಲ್ಲಿರುವವರು ಯಾರು ?

ಶ್ವೇತದ್ವೀಪವಾಸಿಗಳ ಬಗ್ಗೆ ಮಹಾಭಾರತದಲ್ಲಿ (ಶಾಂತಿಪರ್ವ-ಮೋಕ್ಷಧರ್ಮಘಟ್ಟ೩೩೭-೯-೧೦) ವಿವರಣೆ ಇದೆ. ಇಲ್ಲಿಯ ನಿವಾಸಿಗಳು ಇಂದ್ರಿಯಗಳಿಂದ ರಹಿತರಾಗಿರುವವರು, ನಿರಾಹಾರಿಗಳು, ಜ್ಞಾನ ಸಂಪನ್ನರು, ಸುಗಂಧಯುಕ್ತರು, ನಿತ್ಯಕೈಂಕರ್ಯಪರರು, ದಿವ್ಯವಾದ ಅವಯವ ಉಳ್ಳವರು, ವಜ್ರಕಾಯರು, ಛತ್ರಾಕೃತಿ ಶಿರಸ್ಸುಳ್ಳವರು, ಪದ್ಮಪಾದರು, ಸೂರ್ಯಕಾಂತಿಯುಕ್ತರು. "ವಜ್ರಾಸ್ಥಿಕಾಯ ದಿವ್ಯಾವಯರೂಪಃ ಛತ್ರಾಕೃತಿ ಶೀರ್ಷಾಃ ರಾಜೀವಾಚ್ಛಾದಪಾದ ದಂತ್ಯೆರ್ಯುಕ್ತಃ" ಇದರ ಸೂಚಕವಾಗಿ ದಿವ್ಯಕ್ಷೇತ್ರಗಳಲ್ಲಿ ಜಯವಿಜಯ ಮೂರ್ತಿಗಳನ್ನು ಅಕ್ರಮಕಾರರಿಗೆ ಭಯಶಂಕೆ ಉಂಟುಮಾಡುವ ಸಲುವಾಗಿ ದೊಡ್ಡಕಣ್ಣು, ಕೋರೆ ದಾಡೆ ಹಾಗೂ ತೋರು ಬೆರಳು ಕಾಣುವಂತೆ ನಿರ್ಮಿಸಿರುವುದನ್ನು ನೋಡಬಹುದು. ಕಲಿಯನರೂ ಪೆರಿಯತಿರುಮೊಳಿ೧-೧-೫ ರಲ್ಲಿ ಹೀಗೆಯೇ ಹೇಳಿರುತ್ತಾರೆ. ಶ್ವೇತ ದ್ವೀಪ ವಾಸಿಗಳನ್ನು ಶ್ರುತಿ 'ಪರಮ ಯೋಗಿನಃ' ಎಂದು ಹೇಳಿದೆ. ಶ್ವೇತದ್ವೀಪದ ಉಲ್ಲೇಖ ಜಯತ್ಸಂಹಿತೆಯಲ್ಲೂ ಹಾಗೂ ತಿರುವಾಯ್‌ಮೊಳಿಯ ವ್ಯಾಖ್ಯಾನ ಕೃತಿಯಾದ ಆರಾಯಿರಪ್ಪಡಿಯಲ್ಲೂ ಇದೆ. ಈ ವಾಸಿಗಳೆಲ್ಲರೂ ಮುಕ್ತರು - 'ಯೇಚ ಮುಕ್ತಾಭವನ್ತೀಹ' ಎಂದು ಮಹಾಭಾರತವು (೩೩೫-೧೦) ಊರ್ಧ್ವಲೋಕ ಮುಕ್ತರು ಎಂದು ಭಾಗವತ ಹೇಳಿವೆ.

ಭಗವಂತನ ಇಚ್ಛಾನುಸಾರವಾಗಿ ಶುದ್ಧ ಸತ್ವವು ನಿತ್ಯಯುಕ್ತರ ಶರೀರವಾಗಿ ಮಂಟಪಗೋಪುರ ಮೊದಲಾಗಿ ಅಲ್ಲಿ ಪರಿವರ್ತನೆ ಹೊಂದುತ್ತದೆ. ಜ್ಞಾನಕ್ಕೆ ಕುಂದುಂಟಾಗುವ ಪ್ರಸಂಗವೇ ಇಲ್ಲದ ನಿತ್ಯಸೂರಿಗಳು ಇಲ್ಲಿ ಪ್ರಥಮ ಪ್ರಜೆಗಳಾಗಿರುತ್ತಾರೆ. ಇವರೇ ವಿಕುಂಠರು, ಪರಿಜನರು. ಇವರ ಸಂಬಂಧವಿರುವ ಪ್ರದೇಶ ವೈಕುಂಠ. ಇವರಿಗೆ ಸದಾ ಸೇವೆಯನ್ನು ಕೊಡುವವನೇ ವೈಕುಂಠನಾಥ. ಆ ಸೇವೆಯ ವೈಖರಿ ವರ್ಣನೆಗೆ ಮೀರಿದ್ದು. ಪರಿಜನರು ಛತ್ರಚಾಮರಗಳನ್ನು ಹಿಡಿದಿರುವರು. ಅನುಗ್ರಹ ವಿಮಲ ಮುಂತಾದ ಪರಿಚಾರಿಕೆಯರು, ಚಂಡಾದಿ ದ್ವಾರಪಾಲಕರು, ಕುಮುದಾದಿ ಗಣಾಧಿಪರು, ಶೇಷ ಮೊದಲಾದವರ ಪತ್ನಿಯರಾದ ಸೂತ್ರವತಿ, ರುದ್ರಾ ಸುಕೀರ್ತಿಯರು, ವಿವಿಧ ಸೇವೆಗಳಲ್ಲಿ ನಿರತರಾಗಿರುತ್ತಾರೆ. ರಾಮಾನುಜರು ಈ ದಿವ್ಯಸೇವೆಯನ್ನು 'ಪರಿಚರಿತ ಚರಣಯುಗಳ' ಎಂದು ವರ್ಣಿಸಿದ್ದಾರೆ. ೫೦೦ ಮಂದಿ ಕೈಯಲ್ಲಿ ಹಾರವನ್ನು, ೧೦೦ ಜನ ಗಂಧದ ಪುಡಿಯನ್ನು, ೧೦೦ ಜನ ಆಭರಣಗಳನ್ನು, ವಸ್ತ್ರ ಅಂಜನ ಚೂರ್ಣ ಮಾಲೆ ಹಿಡಿದ ದಿವ್ಯಾಪ್ಸರಸಿಯರು, ಭಗವಂತನಿಂದ ಆಜ್ಞಪ್ತರಾಗಿರುವ ಆತಿವಾಹಕರು ವಿರಜಾನದಿ ದಾಟಿ ಬಂದ ಆಧ್ಯಾತ್ಮಿಕ ಸಾಹಸಿಗಳಾದ ಮುಕ್ತರನ್ನು ಪುಷ್ಪವೃಷ್ಟಿ ಮಾಡುತ್ತ "ಹೀಗೆ ದಯಮಾಡಿ ಹೀಗೆ ದಯಮಾಡಿ" ಎಂದು ಎದಿರುಗೊಳ್ಳುವರು, ಆದಿತ್ಯರು ಕಿರಣತೋರಿ ಮಾರ್ಗ ತೋರುವರು, ವಾದ್ಯ ಘೋಷಗಳೊಂದಿಗೆ ನಿತ್ಯಸೂರಿಗಳು 'ಅಹಮನ್ನಂ ಅಹಮನ್ನಂ' ಎಂದು ಗಾನ ಮಾಡಿ ಅಂಜಲಿ ಸಮರ್ಪಿಸಿ, ವೈಕುಂಠದಾಸರೆ ನೀವು ನಮಗೂ ಸ್ವಾಮಿ ಎಂದು ಪಾದತೊಳೆದು ಸತ್ಕರಿಸುವರು. ಅನಂತರ ಎಲ್ಲ ಪರಿಜನರು ಅವನನ್ನು ವೈಕುಂಠನಾಥನ ಬಳಿಗೆ ಕರೆದೊಯ್ಯುವರು. "ನನ್ನನ್ನು ಏಕಾಂತವಾದ ಅತ್ಯಂತ ನಿಕಟ ಸೇವೆ ಮಾಡಲು ಒಪ್ಪಿಸಿಕೊ ಸ್ವಾಮಿಯೇ" ಎಂದು ಪ್ರಪನ್ನನು ದೀನನಾಗಿ ಬೇಡುವನು. ಆಚಾರ್ಯಮುಖೇನ ಪ್ರಪತ್ಯಾನುಷ್ಠಾನ ಮಾಡಿದ ಚೇತನನನ್ನು ಕಂಡ ಮಾತೆಯು ಒಬ್ಬ ತಾಯಿ ಶಿಶುವನ್ನು ಆದರಿಸಿದಂತೆ ಮುಕ್ತನನ್ನು ವಿಚಾರಿಸಿ ಅವನನ್ನು ನಿತ್ಯಸೂರಿಗಳ ಗೋಷ್ಠಿಯಲ್ಲಿ ಸೇರಿಸಲು ಪತಿಗೆ ಶಿಫಾರಸು ಮಾಡುವಳು. ಮಹಾಕರುಣಾಳುವಾದ ಭಗವಂತನು ಜನ್ಮಜನ್ಮಾಂತರಗಳಿಂದ ಸಂಸಾರ ಪ್ರವಾ

ಕದಲ್ಲಿ ಸಿಲುಕಿ ನೊಂದು ಬೆಂದು ಸಿಹಿಕಹಿಗಳನ್ನನುಭವಿಸಿ ಬಂದ ಪ್ರಪನ್ನನನ್ನು ವಿಚಾರಿಸಿ ಶಾಶ್ವತವಾದ ಕೈಂಕರ್ಯ ಸಾಮ್ರಾಜ್ಯವನ್ನು ಕೃಪೆಮಾಡುವನು. ಪ್ರಪನ್ನನೆಂಬ ಯೋಗಿಯು "ನೇತಿ ನೇತಿ" ಎಂಬ ಭಾವನೆಯಿಂದ ಪರಮಾತ್ಮನನ್ನೂ ಅವನ ಸ್ವರೂಪವನ್ನೂ ನೆನೆದು ಪೂರ್ಣನಾಗಿ ಪರಮ ಪದವನ್ನು ಸೇರುವನು ಎಂದು ಭಾಗವತದಲ್ಲಿ ಹೇಳಿದೆ (II - ೨, ೧೫, ೧೮) ವೈಕುಂಠವಾಸಿಗಳಾಗಿ ಬರುವ ಮುಕ್ತಾತ್ಮರನ್ನು ಎದಿರುಗೊಳ್ಳುವ ವೈಖರಿಯನ್ನು ಮಾರನರು ಕುಡಿಯಡಿಯಾರಿವರ್ ಗೋವಿಂದನ್ ಎನಕ್ಕಿನ್ನು ಮುಡಿಯುಡೈವಾನವರ್ ಮುಕ್ಕೈಮುಕ್ಕೈ ಎದಿರ್‌ಗೊಳ್ಳುವರ್" ಎಂದು ೧೦-೧೦-೯ ರಲ್ಲಿ ವಿವರಿಸಿರುತ್ತಾರೆ.

ನಿಯತ ದಾಸರಾದ ಭಕ್ತರನ್ನು 'ನಮಾಮಿ ಪರಮಾಂ ಗತಿಂ' ಎಂದು ವರಾಹಸ್ವಾಮಿ ಹೇಳಿರುವಂತೆ, ಆತಿವಾಹಕರ ಮೂಲಕ ವೈಕುಂಠಕ್ಕೆ ಬಂದ ಮುಕ್ತನಿಗೆ ಪರರೂಪ ತೋರಿಸಿ ಮುಕ್ತೈಶ್ವರ್ಯವನ್ನು ಕೃಪೆಮಾಡಿರುವ ಭಗವಂತನ ಸೌಲಭ್ಯವನ್ನು ಅ) ನಮ್ಮಾಳ್ವಾರರು "ವಾರಾಯ್ ಉನ್ ತಿರುಪಾದ ಮುರ್ ಕೀಳ್ ಪೇರಾದೇಯಾನ್ ವಂದಡೈಯುಂ ಪಡಿ" ಎಂದೂ (೨-೯-೭), ಆ) ವೈಕುಂಠದಲ್ಲಿ ಮಹಾರಾಜನ ಸ್ಥಾನದಲ್ಲಿರುವ ಭಗವಂತನು ಮುಕ್ತನಿಗೆ ಆಸ್ಥಾನವನ್ನು ಕೊಟ್ಟು ತಾನು ಯುವರಾಜನಾಗಲು ಸಂಕಲ್ಪಿಸುವನು ಎಂಬುದನ್ನು ಭಟ್ಟರು ಪೆರಿಯಾಳ್ವಾರ್ ತಿರುಮೊಳಿ ೩-೬-೩ ರಲ್ಲಿ ಹೇಳಿರುತ್ತಾರೆ.

ವಾನಿಳವರಶು ವೈಹುಂದಕುಟ್ಟನ್
ವಾಸುದೇವನ್
ನಸ್ವಕೋನ್ಡಿಳವರಶುಕೋಮಲಕುಟ್ಟನ್
ಗೋವಿಂದನ್

ಇಷ್ಟಕ್ಕೆ ಅವನ ಸೌಲಭ್ಯವು ಮುಗಿಯುವುದಿಲ್ಲ. ಒಮ್ಮೆ ಇಲ್ಲಿಗೆ ಬಂದವರಿಗೆ ಪುನರ್ಜನ್ಮವಿಲ್ಲದಂತೆ ಮಾಡುವನು - ಎಂದು ಗೀತೆಯ ೧೫-೬ ರಲ್ಲಿಯೂ ಕಠೋಪನಿಷತ್‌ನ ೧೪ ಅಧ್ಯಾಯದಲ್ಲಿಯು ಸ್ಪಷ್ಟವಾಗಿದೆ. ಪಾಶ್ಚಾತ್ಯರು 'NON RERURN' ಎಂದು ವ್ಯಾಖ್ಯಿಸಿದ್ದಾರೆ. ಈ ದಿವ್ಯಗತಿಯನ್ನು ಭಟ್ಟರು ಏಣಿಗೆ ಹೋಲಿಸಿ, ಭಗವಂತನು ಮುಕ್ತನಿಗೆ ಈ ಏಣಿ ಏರಲು ಕೃಪೆ ಮಾಡಿ ನಂತರ ಆ ಏಣಿಯನ್ನು ತೆಗೆದುಬಿಡುವನು ಮತ್ತೆ ಇಳಿಯಲಾಗದು ಎಂಬ ಅದ್ಭುತವನ್ನು 'ಇರುಳಾಗುತ್ತಮ್ ಎರಿ ಕದಿರೋನ್ ಮಂಡಲತ್ತೊಡೇತ್ತಿವೈತ್ತ ಏಣಿವಾಂಗಿ' ಎಂದು ಹೇಳಿರುತ್ತಾರೆ (೯-೩). 'ಪರಮಂ ಸಾಮ್ಯಮುಪೈತಿ' ಎಂಬಂತೆ ಭಗವಂತನೊಡನೆ ಪರಮಸಾಮ್ಯಾಪತ್ತಿಯನ್ನು ಹೊಂದಿದ ಮುಕ್ತನು ಸತ್ಯಸಂಕಲ್ಪಾದಿಗಳನ್ನು ಹೊಂದಿ ಭಗವತ್ಸಂಕಲ್ಪಕ್ಕನುಗುಣನಾಗುವನು. ಮತ್ತು ಅಪ್ರಾಕೃತ ಶರೀರವನ್ನು ಹೊಂದುವನು ಎಂದು ಶ್ರುತಿ ಹೇಳುವುದು. "ಏಕದಾ ದಶಧಾಚೈವ ಶತಧಾ ಚ ಸಹಸ್ರಧಾ ಅನೇಕಧಾ ಸ್ವಸಂಕಲ್ಪಾತ್ ಆತ್ತಕಿಂಕರ ವಿಗ್ರಹ".

## ಮಾರ್ಗ :

ಪ್ರಪನ್ನನು ವೈಕುಂಠಾಭಿಮುಖವಾಗಿ ತೆರಳುವ ಮಾರ್ಗಕ್ಕೆ ಅರ್ಚಿರಾದಿ ಮಾರ್ಗ ಎಂದು ಹೆಸರು. ಗೀತೆಯು 'ಶುಕ್ಲಗತಿ' ಎಂದು ಹೇಳಿದೆ. ಈ ಮಾರ್ಗದಲ್ಲಿ ೧೨ ದೇವತೆಗಳಿರುವರು. ಇವರು ಭಗವಂತನ ಆಜ್ಞಾಭಿಮಾನ ದೇವತೆಗಳಾದ್ದರಿಂದ ಅರ್ಚಿರಾದಿ ದೇವತೆಗಳು ಎಂದು ಹೆಸರು. ಇವರುಗಳು ದೇವಯಾನ ಮಾರ್ಗದ ವಿವಿಧ ಸ್ಥಾನಗಳಲ್ಲಿ ಭಗವಂತನಿಂದ ನಿಯಮಿಸಲ್ಪಟ್ಟಿರುತ್ತಾರೆ. ಅಗ್ನಿ ಮತ್ತು ಅಹಸ್ಸು ಶುಕ್ಲಪಕ್ಷ ಮಾರ್ಗವನ್ನೂ, ವಾಯು ಸೂರ್ಯ, ಹಿಮ ಚಂದ್ರರೆಂಬ ಸಂವತ್ಸರಾಭಿಮಾನ ದೇವತೆಗಳು ಉತ್ತರಾಯಣಮಾರ್ಗವನ್ನು ಕಾಯುತ್ತಿರುವರು. ಇದನ್ನು ದಾಟಿದ ಮೇಲೆ ತೇಜಸ್ಸು ಇಂದ್ರವರುಣ ಬ್ರಹ್ಮರಿಂದ ಸ್ವಾಗತ ಹಾಗೂ ದೇವತೆಗಳ ಮಹಿಷಿಯರಿಂದ ಮಂಗಳಾಶಾಸನವಾದ ಮೇಲೆ ವೈದ್ಯುತನೆಂಬ ದೇವತೆಯು ಪ್ರಪನ್ನನನ್ನು ವೈಕುಂಠದ ಎಲ್ಲೆಗೆ ಕರೆದೊಯ್ಯುವನು. ದೇವತೆಗಳು ಇವನಲ್ಲಿ ಅತಿಶಯವಾದ ಪ್ರೇಮವನ್ನು ತೋರುವರು. ಇವರ ಬಗ್ಗೆ ಬೃಹದಾರಣ್ಯಕ ಹಾಗೂ ಛಾಂದೋಗ್ಯದಲ್ಲಿ ಉಲ್ಲೇಖಗಳಿವೆ. ಕೌಷೀತಕಿ ಬ್ರಾಹ್ಮಣದ ೧-೩ ರಲ್ಲಿ "ಬ್ರಹ್ಮವಿದನಾದವನು ದೇವಯಾನ ಮಾರ್ಗವನ್ನು ಅವಲಂಬಿಸಿ ಅಗ್ನಿವಾಯು ಆದಿತ್ಯ ಇಂದ್ರ ಹಾಗೂ ಬ್ರಹ್ಮಲೋಕಗಳನ್ನು ಹಾದು ವೈಕುಂಠವನ್ನು ಸೇರುವನು" ಎಂದು ಹೇಳಿದೆ.

"ಸ ಏತಂ ದೇವಯಾನಂ ಪಂಥಾನಮಾಪದ್ಯಾಗ್ನಿ ಲೋಕ ಮಾಗಚ್ಛತಿ ಸವಾಯು ಲೋಕಂ, ಸವರುಣ ಲೋಕಂ ಸ ಆದಿತ್ಯಲೋಕಂ ಸ ಇಂದ್ರಲೋಕಂ ಸ ಪ್ರಜಾಪತಿ ಲೋಕಂ"

ಸ್ವರ್ಗ ಎಂಬುದು ವೈಕುಂಠ ಎಂಬುದರ ಪರ್ಯಾಯಪದ. ಕಠೋಪನಿಷತ್ತಿನಲ್ಲಿ 'ಸ್ವರ್ಗೇ ಲೋಕೇನ ಭಯಂ' - ಎಲ್ಲಿ ಯಮಬಾಧೆ ಇಲ್ಲವೋ ಮುಪ್ಪು ಭಯ ಹಸಿವು ಬಾಯಾರಿಕೆಗಳಿಲ್ಲವೋ ಅದೇ ಸ್ವರ್ಗ ಎಂದು ಹೇಳಿದೆ. ಆದರೆ ಇದು ಇಂದ್ರಸ್ವರ್ಗಕ್ಕಿಂತಾ ಭಿನ್ನವಾಗಿದೆ ಎಂಬುದನ್ನು "ಸ್ವರ್ಗೋ ಯಾಮಾಶಕ್ತ" ಎಂದು ಶ್ವೇತಾಶ್ವತರೋಪನಿಷತ್‌ನಲ್ಲಿ ಸ್ಪಷ್ಟಪಡಿಸಲಾಗಿದೆ. ಪಾಶ್ಚಾತ್ಯರು ವೈಕುಂಠವನ್ನು 'Unlimited delight' ಎಂದೂ ಇಂದ್ರಸ್ವರ್ಗವನ್ನು Delightful Image ಎಂದು ಅರ್ಥ ಮಾಡಿರುತ್ತಾರೆ. ಈ ನಿಟ್ಟಿನಲ್ಲಿ ಭೂಲೋಕದಲ್ಲಿನ ದಿವ್ಯಕ್ಷೇತ್ರಗಳಲ್ಲಿ 'ಸ್ವರ್ಗದ ಬಾಗಿಲು' ಎಂಬ ಸೇವೆಯನ್ನು ವೈಕುಂಠದ ಛಾಯೆ ಎಂದು ಭಾವಿಸಲಾಗಿದೆ. 'ಸೋತ್ತುಚುವರ್ಗಂ' ಎಂದು ಆಂಡಾಳ್ ಮಾತೆಯೂ 'ಚುವರ್ಗಂ' ಎಂದು ಎಲ್ಲಾ ಆಳ್ವಾರುಗಳು ಧಾರಾಳವಾಗಿ ಉಪಯೋಗಿಸಿರುತ್ತಾರೆ.

ಮೋಕ್ಷಗಳಲ್ಲಿ ಅ) ಸಾಯುಜ್ಯಾದಿಮೋಕ್ಷ, ಆ) ಕೈವಲ್ಯ ಮೋಕ್ಷ ಎಂದು ಎರಡು ಪ್ರಧಾನ ಭಾಗಗಳಿವೆ. ಸಾಯುಜ್ಯಾದಿ ಮೋಕ್ಷದಲ್ಲಿ ೪ ಉಪಬಾಗಗಳಿವ. ೧. ಸಾಲೋಕ್ಯ- ಆ ದಿವ್ಯಲೋಕದಲ್ಲಿ ಒಟ್ಟಾಗಿ ವಾಸಮಾಡುವುದು. ೨. ಸಾರೂಪ್ಯ - ಭಗವಂತನಂತೆ ರೂಪ ಹೊಂದುವುದು. ೩. ಸಾಮೀಪ್ಯ- ಸದಾಭಗವಂತನ ಬಳಿ ಇರುವುದು ಮತ್ತು ೪. ಸಾಯುಜ್ಯ - ಎಲ್ಲರ ಜೊತೆ ಇದ್ದು ಸಮಾನವಾದ ಭೋಗವನ್ನು ಹೊಂದುವುದು. ಇದೇ ಏಕತ್ವ ಸಾಯುಜ್ಯಮುಕ್ತಿಯೇ ಪರಿಪೂರ್ಣವಾದುದು. ಸೂರ್ಯನಲ್ಲಿ ಪ್ರಭೆ ಸೇರಿರುವಂತೆ ಉಳಿದ ಮುಕ್ತಿಗಳು ಇದರಲ್ಲಿ ಅಂತರ್ಗತವಾಗಿದೆ. (ದೇಶಿಕರ ತತ್ವಮುಕ್ತಾಕಲಾಪ ಹಾಗೂ ರಹಸ್ಯತ್ರಯಸಾರ) ಇವುಗಳ ಬಗ್ಗೆ ಪರಮಪದ ಸೋಪಾನ ಕೃತಿಯ 'ದಿವ್ಯದೇಶಪ್ರಾಪ್ತಿ' ವಿಭಾಗದಲ್ಲಿ ಉಲ್ಲೇಖ ಇದೆ. ದಿವ್ಯಕ್ಷೇತ್ರಗಳಲ್ಲಿ ದ್ವಾರಪಾಲಕರ ವಿಗ್ರಹವು ವಿಷ್ಣುಮೂರ್ತಿಯಂತೆ ಗೋಚರಿಸುವುದು ಸಾಯುಜ್ಯದ ಒಂದು ಉತ್ತಮ ನಿದರ್ಶನವಾಗಿದೆ.

ಕೈವಲ್ಯ ಮೋಕ್ಷ ವೈಕುಂಠಮೋಕ್ಷಕ್ಕಿಂತ ಭಿನ್ನವಾಗಿದೆ. ಕೈವಲ್ಯದಲ್ಲಿ ಮಹದಾನಂದ ಉಂಟಾದರೂ ಭಗವದನುಭವವಾಗಲಿ ನಿತ್ಯ ಕೈಂಕರ್ಯದಿಂದ ಪ್ರಾಪ್ತವಾದ ಭಗವದಾನಂದವಾಗಲಿ (ಬ್ರಹ್ಮಾನಂದ ಈಶ್ವರಾನಂದ) ಇರುವುದಿಲ್ಲ. ಬ್ರಹ್ಮಸ್ವರ್ಗಾದಿ ಲೋಕಪ್ರಾಪ್ತಿಯಲ್ಲಿ ಪರಿಪೂರ್ಣತೆ ಇಲ್ಲದಿರುವುದರಿಂದ ಜ್ಞಾನಿಗಳು ಸ್ವರ್ಗಪ್ರಾಪ್ತಿಯನ್ನು ಅಪೇಕ್ಷಿಸುವುದಿಲ್ಲ. ಅವರ ಪ್ರಕಾರ ಸ್ವರ್ಗಾನುಭವ ಅಲ್ಪಸ್ಥಿರವಾದುದು. ಕೈವಲ್ಯ ಮೋಕ್ಷವನ್ನು ನಮ್ಮಾಳ್ವಾರರು "ಒಯಿಂ ಮೂಪ್ಪು ಇರಪ್ಪುಪ್ಪಿಣಿ ತುರುಂದು ಇನ್ನು ದೈತ್ತಾಮೇಲುಂ" ಎಂದು ಹೇಳಿ ಐಹಿಕ ಐಶ್ವರ್ಯ, ಪಾರಲೌಕಿಕ ಪ್ರಯೋಜನಗಳು ಪುರುಷಾರ್ಥವಲ್ಲ ಏಕೆಂದರೆ ಇವು ಅಲ್ಪಸ್ಥಿರವಾದುದು. ಆತ್ಮಾನುಭವವಾದ ಕೈವಲ್ಯವೂ ಪುರುಷಾರ್ಥವಲ್ಲ ಏಕೆಂದರೆ ಅದರಲ್ಲಿ ಕೈಂಕರ್ಯವೆಂಬ ಭಗವದನುಭಾವವಿರುವುದಿಲ್ಲ. ಕೈವಲ್ಯಾರ್ಥಿ ಭಗವಂತನಿಂದ ದೂರವಿರುವನು. ಆ ದಿವ್ಯ ಕೈಂಕರ್ಯದ ಮುಂದೆ ಕೈವಲ್ಯ ಅಲ್ಪ

ವಾದುದು. ಭಗವತ್ಕೈಂಕರ್ಯವೇ ಮೂಲವಾದ ಮೋಕ್ಷ - ವೀಡಪ್ಪೆ (ವೀಡ - ದೆ) ಎಂದು ೪-೧-೧೦ ರಲ್ಲಿಯೂ ಹಾಗೂ "ಕೈವಲ್ಯದಲ್ಲಿ ಭಗವಂತನನ್ನೇ ನೆನೆಯದ ಆ ಸ್ಥಿತಿಯು ದುಃಖಮಯವಾದ್ದು" ಎಂದು ಪೆರಿಯ ತಿರುವಂದಾದಿಯಲ್ಲಿ (೮೦) ಖಚಿತ ಪಡಿಸಿರುತ್ತಾರೆ. ಭಗವದನುಭವ ಆನಂದ, ಸಾಯುಜ್ಯಾದಿಗಳಿಗಿಂತ ಅಮೂಲ್ಯವಾದುದು ಎಂದು ಭಗವಂತನೇ ಹೇಳಿರುತ್ತಾನೆ. "ನನ್ನಲ್ಲಿ ಅನುರಕ್ತರಾದ ಭಕ್ತರು ನನ್ನ ಸೇವೆಯ ಹೊರತು ಸಾಯುಜ್ಯಾದಿಗಳನ್ನು ನಾನೇ ನೀಡಿದರೂ ಸ್ವೀಕರಿಸುವುದಿಲ್ಲ (ಭಾಗ - ೩-೨೯-೧೩) "ಸಾಲೋಕ್ಯ ಸಾರ್ಷ್ಟಿ ಸಾಮೀಪ್ಯ ಸಾರೂಪ್ಯೈಕತ್ವಮಪ್ಯುತ ದೀಯಮಾನಂ ನ ಗೃಹ್ಣಂತಿ ವಿನಾ ಮತ್ಸೇವನಂ ಜನಾಃ". ಭಗವಂತನ ಕೈಂಕರ್ಯಕ್ಕೋಸ್ಕರ ಮುಕ್ತಿಯನ್ನೇ ತಿರಸ್ಕರಿಸುವ ಭಕ್ತಿಯೇ ಪರಮ ಶ್ರೇಷ್ಠವಾದುದು ಎಂದು ವೇದಾಂತದೇಶಿಕರು ವರದರಾಜ ಪಂಚಾಶತ್‌ನಲ್ಲಿ ಹೇಳಿರುತ್ತಾರೆ. ಇಂಥಾ ಶಾಶ್ವತ ಮೋಕ್ಷವನ್ನು ಪ್ರಪತ್ತಿಯೋಗದಿಂದ ಸಾಧಿಸಬಹುದು. "ನ್ಯಾಸೇನೈವ ಮಹಾಮುನೇ ಪ್ರಾಪ್ಯತೇ ಪರಂಧಾಮ ಯತೋನಾವರ್ತತೇಯತಿ" (ಅಹಿರ್ಬುಧ್ನ ಸಂಹಿತೆ).

## ಸಾಹಿತ್ಯ :

ಶ್ರೀ ವೈಷ್ಣವ ಸಾಹಿತ್ಯದಲ್ಲಿ ವೈಕುಂಠದ ಉಲ್ಲೇಖವಿರದ ಗ್ರಂಥವಿಲ್ಲ, ಸ್ತುತಿ ಇಲ್ಲ. ಎಲ್ಲ ಸಂತರು ಭಕ್ತಕವಿಗಳು ಈ ಪರಮವಿಷಯವನ್ನು ದೀರ್ಘವಾಗಿ ವಿವರಿಸಿರುತ್ತಾರೆ. ನಮ್ಮಾಳ್ವಾರರ ತಿರುವಾಯ್‌ಮೊಳಿ ೧೦-೧೦-೯ ಪಾಶುರಗಳು ವೈಕುಂಠವನ್ನು ಕುರಿತದ್ದು. ರಾಮಾನುಜರ ಗದ್ಯತ್ರಯದ ವೈಕುಂಠಗದ್ಯ, ಶ್ರೀವತ್ಸ ಚಿಹ್ನಮಿಶ್ರರ ವೈಕುಂಠಸ್ತವ, ವಾದಿರಾಜತೀರ್ಥರ ವೈಕುಂಠವರ್ಣನೆ, ಪರಾಶರ ಭಟ್ಟರ ಶ್ರೀರಂಗರಾಜಸ್ತವ, ವೇದೋಪನಿಷತ್ತುಗಳು ಪರಂಧಾಮವನ್ನು ವಿವಿಧ ರೀತಿಯಲ್ಲಿ ವರ್ಣಿಸಿಕೊಂಡಾಡುವುವು. ನೃಸಿಂಹಾವತಾರಕ್ಕೂ ವೈಕುಂಠಕ್ಕೂ ಸಾಮ್ಯವನ್ನು ಕೊಡಲು ದೇಶಿಕರು ದಶಾವತಾರ ಸ್ತೋತ್ರದಲ್ಲಿ ಅತಿಸುಂದರ ಅತ್ಯಂತ ಸುಘಟಿತವಾದ ನೃಸಿಂಹ ರೂಪವನ್ನು "ವೈಕುಂಠಕಂಠೀರವ" ಎಂದು ಸಂಬೋಧಿಸಿದ್ದಾರೆ. ಹಿಂದೂಗಳಲ್ಲಿ ಮಡಿದವರು ವೈಕುಂಠ ಸೇರುವರು ಎಂಬ ಕಲ್ಪನೆ ಎಲ್ಲರಲ್ಲೂ ಆಳವಾಗಿ ಬೇರೂರಿದೆ. ಶ್ರೀ ವೈಷ್ಣವರಲ್ಲಿ ವಿಶೇಷವಾಗಿ ಭಗವದ್ವಿಷಯವಾದ ನಮ್ಮಾಳ್ವಾರರ ತಿರುವಾಯ್‌ಮೊಳಿಯ ಸಾವಿರ ಪಾಶುರಗಳನ್ನು ಪಾರಾಯಣ ಮಾಡುವ ವಾಡಿಕೆ ಇದೆ. ಗೀತಾಪಠಣವು ಇರುವುದು. ಭಗವದ್ಗೀತೆಯನ್ನು ಅಧ್ಯಯನ ಮಾಡಿ ಯಥಾರ್ಥವನ್ನು ಕಂಡುಕೊಳ್ಳುವವನು ಘೋರ ಪಾಪವನ್ನು ಮಾಡಿದ್ದರೂ ವೈಕುಂಠಸೇರುವನು ಎಂದು ವರಾಹಪುರಾಣೋಕ್ತಿ ಇದೆ.

## ಭೂವೈಕುಂಠ :

ವರ್ಷದಲ್ಲಿ ಬರುವ ೨೪ ಏಕಾದಶಿಗಳಲ್ಲಿ ಮೋಕ್ಷ ಏಕಾದಶಿ ಅಥವ ಮುಕ್ಕೋಟಿ ಏಕಾದಶಿ ಎಂದು ಹೆಸರುವಾಸಿಯಾಗಿರುವ ವೈಕುಂಠ ಏಕಾದಶಿ ಪ್ರಧಾನವಾದುದು. ಎಲ್ಲಾ ದಿವ್ಯ ಕ್ಷೇತ್ರಗಳಲ್ಲಿ ಅದರಲ್ಲೂ ವಿಶೇಷವಾಗಿ ಶ್ರೀರಂಗದಲ್ಲಿ ಜಾತಿಮತ ಭೇದವಿಲ್ಲದೆ ಎಲ್ಲ ಭಕ್ತ ಜನರು ಒಂದುಗೂಡಿ ಸೇವೆಮಾಡುವುದು 'ವೈಕುಂಠ' ಎಂಬ ಪದದ ಅರ್ಥವೇ ಆಗಿದೆ. ವೈಕುಂಠದ್ವಾರ ಸ್ವರ್ಗದ ಬಾಗಿಲು, ತಿರುವಾಶಲ್ (ಶ್ರೀರಂಗಕ್ಕೆ ಇನ್ನೊಂದು ಹೆಸರು) ಸೇವೆ ವೈಕುಂಠ ಕಲ್ಪನೆಗೆ ಒತ್ತುಕೊಟ್ಟಿದೆ. ಅಂದರೆ ಭೂವೈಕುಂಠ ಎಂಬುದು ವೈಕುಂಠಛಾಯೆ ಎಂದು ಭಾವಿಸಲಾಗಿದೆ. 'ಶ್ರೀರಂಗ ರಾಜಸ್ತವ'ದಲ್ಲಿ (೩೮) ಶ್ರೀರಂಗದ ೧೦೦೦ ಕಾಲು ಮಂಟಪವನ್ನು 'ಸಹಸ್ರಸ್ಥೂಣ' ಎಂಬ ಶ್ರುತಿ ಉಲ್ಲೇಖಕ್ಕೆ ಸಮೀಕರಿಸಲಾಗಿದೆ. ತೃತೀಯ ವಿಭೂತಿಯಾದ ಶ್ರೀರಂಗವೇ ಭೂವೈಕುಂಠ ಎಂದೂ ಹೇಳಿದೆ. "ಕಾವೇರಿ ವಿರಜಾಸೇಯಂ ವೈಕುಂಠಂ ರಂಗಮಂದಿರಂ ವಾಸುದೇವೋ ರಂಗೇಶ ಪ್ರತ್ಯಕ್ಷಂ ಪರಮಂ ಪದಂ" ಇದೇ ಅರ್ಥದಲ್ಲಿ ಶ್ರೀಪಾದರಾಜರು "ಹರಿ ಪಾದೋದಕ ಸಮಕಾವೇರಿ ವಿರಜಾನದಿಯ ಸ್ನಾನ ಮಾಡಿ ಪರಮ ವೈಕುಂಠ ರಂಗ ಮಂದಿರ ಪರವಾಸುದೇವನ ನೋಡದ ಕಣ್ಗಳಿದ್ಯಾತಕೋ" ಎಂದು ಹಾಡಿ ಶ್ರೀರಂಗವನ್ನು ಪರಮ ವೈಕುಂಠಕ್ಕೆ ಹೋಲಿಸಿರುತ್ತಾರೆ. ಕಾವೇರಿಯೇ ವಿರಜಾನದಿ, ಶ್ರೀರಂಗಮಂದಿರವೇ ವೈಕುಂಠ, ಶ್ರೀರಂಗನಾಥನೇ ಪರವಾಸುದೇವ, ಈ ಕ್ಷೇತ್ರಕ್ಕೆ ಹೋಗುವ ಮಾರ್ಗವೇ ಅರ್ಚಿರಾದಿಮಾರ್ಗ, ಮೂಲ ವೈಕುಂಠಕ್ಕೆ ಇದೇ ಸೋಪಾನ ಎಂಬುದೇ ಅಭಿಪ್ರಾಯ. ವೈಕುಂಠ ಮೂರ್ತಿಗಿಂತ ಅರ್ಚಾಮೂರ್ತಿಯಲ್ಲಿ ಗುಣಾಧಿಕ್ಯವಿದೆ. ಅಲ್ಲಿ ನಿತ್ಯಸೂರಿಗಳ ಗೋಷ್ಠಿಯಂತೆ ಇಲ್ಲಿ ಭಾಗವತ ಸಮೂಹವಿದೆ. ಭಗವತ್ಸನ್ನಿಧಿಗಿಂತ ಭಾಗವತ ಮಂಡಲಿಯಲ್ಲಿರುವುದೇ ಪರಮ ಪುರುಷಾರ್ಥ. "ಪರಿಜನೈಸ್ತವ ಸಂಗಸೀಮ" ಎಂದು ವೈಕುಂಠಸ್ತವದಲ್ಲೂ, "ವಾಸಸ್ಥಾನಂ ತದಿಹ ಕೃತಿನಾಂಭಾತಿ ವೈಕುಂಠಕಲ್ಪಂ"ಎಂದು ದೇಶಿಕರ ರಹಸ್ಯತ್ರಯ ಸಾರದಲ್ಲಿ ಹೇಳಿದೆ. ಹನುಮದ್ವಿಭೀಷಣ ಪಾಣಾಳ್ವಾರರು ಮೋಕ್ಷವನ್ನೇ ನಿರಾಕರಿಸಿ ಅರ್ಚಾವತಾರಕ್ಕೆ ಮನಸೋತು ಶ್ರೀರಂಗಕ್ಷೇತ್ರದಲ್ಲೇ ಅಂಜಲೀ ಬದ್ಧರಾಗಿ ಉಳಿದಿರುತ್ತಾರೆ. ಭಗವಂತನು ವೈಕುಂಠವನ್ನು ಮರೆತು ಶ್ರೀರಂಗದಲ್ಲಿ ನೆಲೆಸಿದ್ದಾನೆ. "ಶ್ರೀ ವೈಕುಂಠಾಯ ದಿವ್ಯಲೋಕಾಯ ನಮಃ ಓಂ ವೈಕುಂಠಾಯ ದಿವ್ಯ ಜನ ಪ್ರದಾಯ ನಮಃ ಓಂ ವೈಕುಂಠಾಯ ದಿವ್ಯ ನಗರಾಯ ನಮಃ ಓಂ ವೈಕುಂಠಾಯ ವಿಮಾನಾಯ ನಮಃ" ಎಂದು ಕರೆದಿರುತ್ತಾರೆ. ಪರಮೇಚ್ಚುರ (ಕಂಚಿ) ಉಪ್ಪಿಳಿಯಪ್ಪನ್ ಹಾಗೂ ನಂದಿವನಂ (ಕುಂಭಕೋಣ) ವೈಕುಂಠ ಹಾಗೂ ಅರಿಮೇಯ (ತಿರುನಾಂಗೂರು) ತಿರುಕಾಳೀಚ್ಚ್ರಿ ರಾಮ (ಶೀರ್ಹಾಳಿ) ವಿಣ್ಣಹರಂಗಳು ಆಕಾಶ ಅಥವಾ ಗಗನ ನಗರಗಳೆಂದೇ ಅನಾದಿಕಾಲದಿಂದಲೂ ಪೂಜಿಸಲ್ಪಟ್ಟಿವೆ. ಅಳಹರ್‌ಮಲೈ (ತಿರುಮಾಲಿರುಂಶೋಲೈ) ಕ್ಷೇತ್ರವು ಮೂಲ ವೈಕುಂಠ ಲಕ್ಷಣಗಳಿಂದ ಕೂಡಿ ಭೂವೈಕುಂಠವೇ ಆಗಿದೆ. ಎಂದು ಶ್ರೀ ವತ್ಸಚಿಹ್ನ ಮಿಶ್ರರು ಸುಂದರ ಬಾಹುಸ್ತವದಲ್ಲಿ (೭೮) ಹೇಳಿರುತ್ತಾರೆ. "ವೈಕುಂಠಧಾಮನಿ ಸಮ್ಯದಿಷು ವಾಪಿಕಾಸು". ವಲ್ಲಭಾಚಾರ್ಯರ ಪುಷ್ಟಿಮಾರ್ಗದ ಪ್ರಕಾರ ಶ್ರೀಕೃಷ್ಣನು ಅನಂತ ಶಕ್ತಿಯುತನಾಗಿ ಎಲ್ಲೆಲ್ಲಿ ಲೀಲೆಯಲ್ಲಿ ತೊಡಗುವನೋ ಅದೇ ವೈಕುಂಠ. ಶ್ರೀ ಕೃಷ್ಣನ ಲೀಲಾಸ್ಥಳಗಳಲೆಲ್ಲಾ ವೈಕುಂಠದ ವ್ಯಾಪ್ತಿ ಇದೆ. ಗೋಲೋಕ, ವೈಕುಂಠದ ಒಂದಂಶ.

ಲೋಕ ಕಲ್ಯಾಣಕ್ಕಾಗಿ ಭಗವಂತನು ವೈಕುಂಠವನ್ನು ನಿರ್ಗಮಿಸಿ ಸಪ್ತಗಿರಿಯಲ್ಲಿ ನಿಂತ. "ಮಾಯಾವಿ ಪರಮಾನಂದಂ ತ್ಯಕ್ತ್ವಾ ವೈಕುಂಠಮುತ್ತಮುಂ" ಎಂದೂ "ವೇಂಕಟಾಚಲ ನಿಲಯಂ ವೈಕುಂಠಪುರವಾಸಂ" ಎಂದೆಲ್ಲಾ ಐತಿಹ್ಯಗಳಿವೆ. ಈ ದಿಸೆಯಲ್ಲಿ ವೈಕುಂಠಕಲ್ಪನೆ ಗಟ್ಟಿಯಾಗಿ ನಿಲ್ಲುವಲ್ಲಿ ತಿರುಪತಿ ಮೇರುಕ್ಷೇತ್ರವಾಗಿದೆ. ಇದರಲ್ಲಿ ಎಂಥಾ ಪಾಮರ - ನಾಸ್ತಿಕರನ್ನು ಮನ ಬದಲಿಸುವ ಮೂರು ಅಂಶಗಳು ಅಡಗಿವೆ. ೧) ಏರ್‌ಕೂಲರ್ ಶಬ್ದ, ಪಚ್ಚ ಕರ್ಪೂರದ ಸುಗಂಧ, ಗೋವಿಂದನಾಮಸ್ಮರಣೆಯ ಮೂಲಕ ಬಂಗಾರದ ಬಾಗಿಲಿನಿಂದ ನಂದಾದೀಪದ ಬೆಳಕಿನಲ್ಲಿ ಕಾಣುವ ಮುಖ ಮಂಡಲದ ದಿವ್ಯ ದೃಶ್ಯ ಹಾಗೆ ಮುಂದುವರೆದರೆ ಕಾಣುವ ಗಂಭೀರ ಮೂರ್ತಿಯ ಪೂರ್ಣದೃಶ್ಯ ೨) ವೈಕುಂಠ ಸರದಿ ಸಾಲಿನ ಸಂಕೀರ್ಣ. ೩) ಎಲ್ಲೆಲ್ಲೂ ಹಸಿರು ಪರಿಸರ ಸಂಗೀತ, ಭಜನೆ, ಗೀತೆಯ ಧ್ವನಿಸುರುಳಿ, ರಾತ್ರಿ ದೀಪಾಲಂಕಾರದಿಂದ ಕಾಣುವ ದೃಶ್ಯ ೪) ಲೌಕಿಕವಾದ ಮನರಂಜನಾ ರಹಿತವಾದ ವಾತಾವರಣ. ಇವುಗಳ ಪೈಕಿ ಮೇಲೆ ಹೇಳಿರುವ ಒಂದನೆ ಅಂಶವೇ ಪ್ರಧಾನವಾದ್ದು. ಆಧ್ಯಾತ್ಮಿಕ ದೃಷ್ಟಿಯಿಂದ ಇದೊಂದು ಅಪೂರ್ವ ಸಾಧನೆ. ಆಡಳಿತ, ನಿರ್ವಹಣೆ, ರಚನೆ ಮುಂತಾದ ಆರ್ಥಿಕ ದೃಷ್ಟಿಯಿಂದ ತಿರುಪತಿಯನ್ನು ರೋಮ್‌ನ 'ವೆಟಿಕಾನ್'ನಂತೆ ಪರಿವರ್ತಿಸುವ ತಿ.ತಿ. ದೇವಸ್ಥಾನದ ಬೃಹತ್ ಪರಿಯೋಜನೆ ಒಂದು ದಿಟ್ಟಹೆಜ್ಜೆಯಾಗಿದೆ. ✿



# ವಾರ್ತಾಲಹರಿ



ಸೇರಿಸಿದ್ದೇ ಅಲ್ಲದೆ, ಮದ್ರಾಸು, ವಿಶಾಖಪಟ್ಟಣ, ನಾಂದೇಡ್, ಬೊಂಬಾಯಿಗಳಿಗೆ ಬ್ರಹ್ಮೋತ್ಸವ ವಿಶೇಷ ರೈಲುಗಳನ್ನೂ ನಡೆಸಿ, ಹಿಂದೆಂದೂ ಇಲ್ಲ ದಷ್ಟು ಮಂದಿಯನ್ನು ತಿರುಮಲೆಯಲ್ಲಿ ಸೇರಿಸುವಲ್ಲಿ ನೆರವುನೀಡಿದರು. ತಿರುಮಲೆಯಲ್ಲಿ ಸಿಬ್ಬಂದಿಗಾಗಿ, ಪೋಲೀಸರಿಗಾಗಿ, ಸ್ಕೌಟ್, ಹೋಂಗಾರ್ಡ್‌ಗಳ ಸೇವೆಯನ್ನು ಗಣನೀಯವಾಗಿ ತಗ್ಗಿಸಿ, ಯಾತ್ರಿಕರಿಗೆ ಹೆಚ್ಚಿನ ವಸತಿ ಸೌಕರ್ಯವನ್ನು ಕಲ್ಪಿಸಲಾಯಿತು. ನಾಲ್ಕು ತಿರುವೀಧಿಗಳಲ್ಲೂ ಸ್ವಾಮಿಯ ಮೆರವ ಣಿಗೆಯನ್ನು ಕುಳಿತು ವ್ಯವಧಾನದಿಂದ ನೋಡಲು ಅನುಕೂಲವಾಗುವಂತೆ ಮರದ ಗ್ಯಾಲರಿಗಳನ್ನು ಏರ್ಪಾಡು ಮಾಡಿದ್ದರು. ಇದರಿಂದಾಗಿ ಎಲ್ಲ ವಾಹನ ಸೇವೆಗಳನ್ನೂ ಐವತ್ತು ಸಾವಿರಕ್ಕೂ ಹೆಚ್ಚು ಮಂದಿ ಕುಳಿತು ಸಾವಧಾನದಿಂದ ನೋಡುವಂತೆ ಆಯಿತು. ವಾಹನ ಸೇವೆಗಳಲ್ಲೂ ಅತಿಹೆಚ್ಚು

# ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಗಳು

ಚಿತ್ರಗಳು - ತಿ.ತಿ.ದೇ. ಫೋಟೋಗ್ರಫಿ ವಿಭಾಗ.

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ವಾರ್ಷಿಕ ಬ್ರಹ್ಮೋತ್ಸವಗಳು 25-10-95 ರಿಂದ 4-10-95 ರ ವರೆಗೆ ಹಿಂದೆಂದೂ ಇಲ್ಲದ ಜನಸಂದಣಿಯ ನಡುವೆ ಪರಮ ವೈಭವದಿಂದ ಯಶಸ್ವಿಯಾಗಿ ನಡೆ ಯಿತು. ಸಾಧಾರಣ ಸಂದಣಿಯಿಂದಲೇ ಆರಂ ಭವಾದರೂ ದಿನೇ ದಿನೇ ಯಾತ್ರಿಕ ಸಂದಣಿ ಹೆಚ್ಚಿ ಬಹುತೇಕ ಎಲ್ಲರಿಗೂ ತೃಪ್ತಿಯಾಗಿ ಸ್ವಾಮಿದ ರ್ಶನವಾಗಿ ಸರ್ವರೂ ಸಂತಸದಿಂದ ಶ್ರೀನಿವಾಸನ ಬ್ರಹ್ಮೋತ್ಸವಗಳನ್ನು ನೋಡುವಂತೆ ಆಯಿತು.

ಈ ಬಾರಿಯ ಬ್ರಹ್ಮೋತ್ಸವದ ವಿಶೇಷವೆಂದರೆ ಹೆಚ್ಚಿನ ಸಿಬ್ಬಂದಿ ಸಹಾಯವಿಲ್ಲದೆ, ಸಾಮಾನ್ಯ ಸಿಬ್ಬಂದಿಯ ಸೇವೆಯಿಂದಲೇ ಬ್ರಹ್ಮೋತ್ಸವಗ ಳನ್ನು ಮತ್ತೂ ಆಕರ್ಷಕವಾಗುವಂತೆ ಮಾಡಿದ್ದು. ಇದಕ್ಕೆ ಕಾರಣ ಕಾರ್ಯನಿರ್ವಹಣಾಧಿಕಾರಿಯವರ ಮುಂದಾಲೋಚನೆಯ ದೀರ್ಘದರ್ಶಿತ್ವ ಹಾಗೂ ಅಹರ್ನಿಶಿ ಜಾಗೃತಿಯ ನಾಯಕತ್ವ ಎನ್ನಬೇಕು. ಅವರ ವಿನಂತಿಯ ಮೇರೆಗೆ ಆರ್.ಟಿ.ಸಿ. ಯವರು ಹೆಚ್ಚಿನ ಬಸ್ ಸೌಕರ್ಯವನ್ನು ಒದಗಿಸಿದ್ದರು. ಅಲ್ಲದೆ ರೈಲ್ವೆಯವರು ತಮ್ಮ ಸಾಧಾರಣ ರೈಲು ಗಳಿಗೆ ಹೆಚ್ಚಿನ ಭೋಗಿಗಳನ್ನು ತಿರುಪತಿಗಾಗಿ



ಮಂದಿ ಸಕ್ರಿಯವಾಗಿ ಭಾಗವಹಿಸುವಂತೆ ಆಯಿತು. ಕೇರಳದ ಢಕ್ಕೆ ವಾದ್ಯ ಉಡುಪಿಯ ಪಂಚವಾದ್ಯ ಹರಿದಾಸರ ಭಜನ ವೃಂದಗಳು ಕೋಲಾಟದ ಜನಪದ ಸಮೂಹ, ವೇದಘೋಷದ ಋತ್ವಿಕ್ ಸಮುದಾಯ, ದ್ರವಿಡ ಪ್ರಬಂಧಗಳ ಅಯ್ಯಂಗಾರ್ ಗಳು, ಅಂಬಾರಿ ಸಹಿತ ಗಜ ಸಮೂಹ, ತುರಗ ದಳ, ಗೋವೃಂದಗಳೆಲ್ಲ ಸ್ವಾಮಿಯ ಆಗಮನವನ್ನು ಸರ್ವ ನಯನ ಮನೋಹರವಾಗಿ ಘೋಷಿಸುತ್ತ ನಡೆವಲ್ಲಿ, ಸ್ವಾಮಿಯ ಬ್ರಹ್ಮೋತ್ಸವದ ಪ್ರತೀಕವಾದ ಬ್ರಹ್ಮರಥ ಮುಂದೆ ನಡೆದಿರಲು, ವಿವಿಧ ವಾಹನಗ ಳಲ್ಲಿ ಸ್ವಾಮಿ ಭಕ್ತರ ಹೃದಯತಿರುವೀಧಿಗಳಲ್ಲಿ ಸಾಗಿ ಬಂದದ್ದು, ದೇವತಾ ರಮ್ಯವಾಗಿದ್ದಿತು. ತಿ.ತಿ.ದೇ. ವಿದ್ಯುತ್ ವಿಭಾಗ, ತೋಟಗಾರಿಕೆ ವಿಭಾಗಗಳ ವಿಶೇಷ ಕೃಷಿಯನ್ನು ನಮೂದಿಸಲೇಬೇಕು. ಮಹಾ ದ್ವಾರದ ಎಡಬಲದಲ್ಲಿ ಆಕಾಶದಲ್ಲಿ "ಗೋವಿಂದ, ಗೋವಿಂದ" ಅಕ್ಷರಗಳು, ವಿವಿಧ ವರ್ಣದ ಬೆಳ ಕಿನ ಚಲಚಿತ್ರಗಳು ಭಕ್ತರನ್ನು ಸೂರೆಗೊಂಡಿತಾವರೆ ಉಪವನವಿಭಾಗದ ಪುಷ್ಪಾಲಂಕಾರಗಳು ನಯನ ಮನೋಹರವಾಗಿದ್ದವು (ಲೇಪಾಕ್ಷಿಯಲ್ಲಿನ ಕರಕು ಶಲಕಲೆಯ ವಸ್ತು ಪ್ರದರ್ಶನವೇ ಅಲ್ಲದೆ, ಅವರ







ಹಿಂದುಗಡೆಯ ಉದ್ಯಾನವನದಲ್ಲಿ ಫಲಪುಷ್ಪ ಪ್ರದರ್ಶನ, ಆಯುರ್ವೇದ ಪ್ರದರ್ಶನಗಳು ಹೆಚ್ಚಿನ ಆಕರ್ಷಣೆಗಳಾಗಿದ್ದವು.) ಉತ್ಸವ ಮೂರ್ತಿ ಬೀದಿ ವರಿದು ಬಂದಾಗ ತಿರುವೀಧಿಗಳಲ್ಲಿ ಏಳು ಸ್ವಾಗತ ತೋರಣಗಳನ್ನು ಮದರಾಸಿನ ಒಬ್ಬ ಭಕ್ತರು ಮಾಡಿಸಿದ್ದರು.

ವಿಪರೀತವಾಗಿ ಹೆಚ್ಚಿದ ಜನ ಸಂದಣಿಗೆ ಅನುಗುಣವಾಗಿ ವಸತಿ ಸೌಕರ್ಯದ ಏರ್ಪಾಡುಗಳು ನಡೆದದ್ದೇ ಅಲ್ಲದೆ, ಗರುಡೋತ್ಸವದಂದೂ, ರಥೋತ್ಸವದಂದೂ ಹೆಚ್ಚಿದ ಜನವಾಹಿನಿಗೆ ಸ್ವಾಮಿ ದರ್ಶನದ ಅವಕಾಶವನ್ನು ವ್ಯವಸ್ಥಿತವಾಗಿ ಮಾಡಲು ಪ್ರಯತ್ನ ಪಡಲಾಯಿತು. ಗರುಡಸೇವೆಯಂದು ಬೆಳಗ್ಗೆ ತೋಮಾಲೆ ಅರ್ಚನೆ ಸೇವೆಗಳ ಸಮಯದಲ್ಲಿ ಭಕ್ತರ ಸಾಲನ್ನು ನಡೆಸಿ, ಅವರು ಜಯವಿಜಯರ ಬಳಿಯಿಂದಲೇ ಸ್ವಾಮಿಯನ್ನು ದರ್ಶಿಸಿ, ಮುಂದುವರೆಯುವ ಏರ್ಪಾಡು ಮಾಡಲಾಯಿತು. ಇದರಿಂದಾಗಿ ಸುಮಾರು ಹತ್ತು ಸಾವಿರಕ್ಕೂ ಹೆಚ್ಚು ಮಂದಿ ಸ್ವಾಮಿ ದರ್ಶನವನ್ನು ಪಡೆಯುವಂತೆ ಆಯಿತು. ಗರುಡಸೇವೆಯ ದಿನ 90,000 ಕ್ಕೂ ಮಿಕ್ಕಿದ ಜನರಿಗೆ ಹಾಗೂ ಆನಂತರದ ಮಂಗಳವಾರದಲ್ಲಿ 94,000 ಮಂದಿಗೆ ದರ್ಶನಾವಕಾಶ ಸಾಧ್ಯವಾಯಿತು. ಇದರಿಂದಾಗಿ ವಿ.ಐ.ಪಿ.ಗಳ ಒತ್ತಡವನ್ನೂ ತಪ್ಪಿಸಿದ್ದು ಒಂದು ವಿಶೇಷ. ಆರ್. ಟಿ. ಸಿ. ಯವರು 45 ಸೆಕೆಂಡ್‌ಗಳಿಗೆ ಒಂದು ಬಸ್‌ನಂತೆ ತಿರುಪತಿ ತಿರುಮಲೆಗಳ ಮಧ್ಯೆ ಬಸ್‌ಗಳನ್ನು ನಡೆಸಿ ಅತಿ ಹೆಚ್ಚಿನ ಜನವನ್ನು ಬ್ರಹ್ಮೋತ್ಸವಗಳಿಗಾಗಿ ಕರೆದೊಯ್ದರು.

ಈ ಬಾರಿಯ ಎಲ್ಲ ವಾಹನ ಸೇವೆಗಳ ವೈಶಿಷ್ಟ್ಯವೆಂದರೆ ಕಾಲಕ್ಕೆ ತಕ್ಕಂತೆ ನಡೆದದ್ದು. ಪ್ರತಿಯೊಂದು ವಾಹನೋತ್ಸವವೂ ತಿಳಿಸಿದ ಸಮಯಕ್ಕೆ ಸರಿಯಾಗಿ ಆಲಯದಿಂದ ಹೊರಬಂದು ಭಕ್ತ ಜನ ಮನ್ನಣೆಯನ್ನು ಗಳಿಸುತ್ತ ಮುಂದುವರಿದು ಸರ್ವರನ್ನೂ ಆಕರ್ಷಿಸಿ ನಡೆದದ್ದು ಅತಿ ಜಾಗ್ರತೆಯ ಯೋಜನಾಬದ್ಧ ವ್ಯವಸ್ಥೆಯಿಂದಲೇ ಸಾಧ್ಯವೆಂದು ಹೆಸರಾಯಿತು. ರಥೋತ್ಸವ ಪ್ರತಿಬಾರಿ ಎರಡುಗಂಟೆಯಲ್ಲಿ ಮೆರವಣಿಗೆ ಮುಗಿಯುವಂತೆ ನಡೆಯುತ್ತಿದ್ದಿತಾದರೆ, ಈ ಬಾರಿ ನಾಲ್ಕು ಗಂಟೆಗೂ ಹೆಚ್ಚುಕಾಲ ನಡೆದು ಎಲ್ಲರೂ ಸಾವಧಾನದಿಂದ ದರ್ಶಿಸುವಂತೆ ಆಯಿತು.

ಧರ್ಮಪ್ರಚಾರ ಪರಿಷತ್ತಿನವರು ಆಸ್ಥಾನ ಮಂಟಪದಲ್ಲಿ ಅದ್ಭುತ ರೀತಿಯ ಧಾರ್ಮಿಕ ಕಾರ್ಯಕ್ರಮಗಳನ್ನು ಏರ್ಪಡಿಸಿದ್ದರು. ಬೆಳಗ್ಗೆಯಿಂದ ರಾತ್ರಿಯವರೆಗೆ ನಡೆದ ಈ ಧಾರ್ಮಿಕ ಕಾರ್ಯಕ್ರಮಗಳನ್ನು ಕ್ಲೋಸ್ಡ್ ಸರ್ಕ್ಯೂಟ್ ಟಿ.ವಿ.ಯ ಮೂಲಕ ತಿರುಮ

ಲೆಯ ಎಲ್ಲಕಡೆ, ಭಕ್ತರು ಸೇರೆಯುವಲ್ಲೆಲ್ಲ ಪ್ರದರ್ಶಿಸಲಾಯಿತು. ಅನ್ನಮಾಚಾರ್ಯಪ್ರಾಜೆಕ್ಟ್, ದಾಸ ಸಾಹಿತ್ಯಪ್ರಾಜೆಕ್ಟ್, ಆಳ್ವಾರ್ ಪ್ರಬಂಧ ಪ್ರಾಜೆಕ್ಟ್‌ಗಳ ಕಾರ್ಯಕ್ರಮಗಳೂ ಇದರಲ್ಲಿಯೇ ಸೇರಿ ವಿಶೇಷ ಜನಾಕರ್ಷಕವಾಗಿದ್ದವು. ಕನ್ನಡ, ತಮಿಳು, ತೆಲುಗು, ಹಿಂದಿ, ಆಂಗ್ಲ ಭಾಷೆಗಳಲ್ಲಿ ಕಾರ್ಯಕ್ರಮಗಳು ಪ್ರಸಾರವಾದದ್ದೇ ಅಲ್ಲದೆ, ಉತ್ಸವ ವಾಹನಗಳ ರನ್ನಿಂಗ್ ಕಾಮೆಂಟರಿಯೂ ಸೇರಿ ಒಂದು ರೀತಿಯಲ್ಲಿ ತಿರುಮಲೆ ಚಿಕ್ಕ ಭರತಖಂಡದಂತೆ, ವೈವಿಧ್ಯಮಯವಾಗಿ ಆದರೆ ಮೂಲ ಸಾಂಸ್ಕೃತಿಕ ಏಕತೆಯನ್ನು ಮೆರೆದು ಕಂಗೊಳಿಸಿತು.

ಆಕಾಶವಾಣಿಯವರೇ ಅಲ್ಲದೆ ದೂರದರ್ಶನದವರೂ ಬ್ರಹ್ಮೋತ್ಸವಗಳನ್ನು ಪ್ರಸಾರ ಮಾಡಿದರು. ಜೊತೆಗೇ ಈನಾಡು ಟಿ.ವಿ.ಯವರೂ ಜೆಮಿನಿ ಟಿ.ವಿ.ಯವರೂ ಬ್ರಹ್ಮೋತ್ಸವಗಳನ್ನು ಯಥಾವತ್ತಾಗಿ ಚಿತ್ತಾಕರ್ಷಕವಾಗಿ ಚಿತ್ರೀಕರಿಸಿ, ಪ್ರಸಾರ ಮಾಡಿದ್ದು ಜನಮನ್ನಣೆಯನ್ನು ಗಳಿಸಿತು. ಈ ಎಲ್ಲ ಪ್ರಸಾರಗಳಿಂದ ತಿರುಮಲೆಗೆ ಬರುವ ಭಕ್ತರ ಸಂಖ್ಯೆ ಕಡಮೆಯಾಗಬಹುದೆಂಬ ನಿರೀಕ್ಷೆ ಸುಳ್ಳಾದದ್ದೇ ಅಲ್ಲದೆ ಇದರಿಂದಾಗಿ ತಿರುಮಲೆಗೆ ಬಂದವರ ಸಂಖ್ಯೆ ಹೆಚ್ಚಾಯಿತು ಎಂಬುದಾಯಿತು. ಈ ಹೆಚ್ಚಿನ ಜನ ಸಂದಣಿಗಾಗಿ ಲಾಡು ವಿತರಣೆಯ ಉದ್ದೇಶದಿಂದ ಹೆಚ್ಚಿನ ಕೌಂಟರ್‌ಗಳನ್ನು ತೆರೆಯಲಾಯಿತು. ಸಾಮಾನ್ಯದಿನಗಳಲ್ಲಿ 20,000 ಕ್ಕಿಂತ ಹೆಚ್ಚಿನ ಜನಕ್ಕೆ ಉಚಿತ ಭೋಜನ ಕಲ್ಪಿಸಲಾಯಿತು, ರದ್ದಿಯ ದಿನಗಳಲ್ಲಿ 30,000 ಕ್ಕೂ ಹೆಚ್ಚು ಮಂದಿ ಉಚಿತ ಭೋಜನ ಸೌಕರ್ಯವನ್ನು ಪಡೆದರು.

ಬ್ರಹ್ಮೋತ್ಸವಗಳನ್ನು ವಿಜಯವಂತವಾಗಿ ನಡೆಸುವಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್ ಅವರ ನೇತೃತ್ವದಲ್ಲಿ, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಸ್ಪೆಷಲ್ ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್, ಪೇಷ್ಕಾರ್ ಇ.ಸಿ. ಗೋವಿಂದರಾಜುಲು, ಪೇಷ್ಕಾರ್ ವಿ.ಜಿ. ಶ್ರೀನಿವಾಸುಲು, ವೈಕುಂಠಂ ಪೇಷ್ಕಾರ್‌ಗಳು ಶ್ರೀ ಕೋಟಿ ಮುನಿರತ್ನಂ ಶ್ರೀ ವರಪ್ರಸಾದ್, ಸ್ವಾಗತ ಡೆ.ಇ.ಓ. ಶ್ರೀ ಆಂಜನೇಯುಲು, ಓ. ಎಸ್. ಡಿ. ಶ್ರೀನಿವಾಸಲು, ಅನ್ನದಾನಂ ಸ್ಪೆಷಲ್‌ಗ್ರೇಡ್ ಡೆ.ಇ.ಓ. ಪಟ್ಟಾಭಿರಾಮಿರೆಡ್ಡಿ, ಕಲ್ಯಾಣಕಟ್ಟ ಡೆ.ಇ.ಓ. ಪಾಲರಾಮಚಂದ್ರಯ್ಯ ಎಸ್. ಇ. ಶ್ರೀ ವೆಂಕಟರಾಮಯ್ಯ ಎಸ್.ಓ. ಕೃಷ್ಣಂರಾಜು, ಎ.ಎಸ್.ಓ. ಡಾ|| ಜನಾರ್ದನ ನಾಯುಡು ಮೊದಲಾದವರು ಅಹರ್ನಿಶಿ ಕೃಷಿಮಾಡಿದರು.



## ಫಲ ಪುಷ್ಪ ವನ ಮೂಲಿಕಾ ಪ್ರದರ್ಶನ







# ಬ್ರಹ್ಮೋತ್ಸವದಲ್ಲಿ ಮುಖ್ಯಮಂತ್ರಿ







ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಬ್ರಹ್ಮೋತ್ಸವದಲ್ಲಿನ ಗರುಡೋತ್ಸವದಂದು ಆಂಧ್ರ ಪ್ರದೇಶದ ಸರ್ಕಾರದ ವತಿಯಿಂದ ರೇಷ್ಮೆ ವಸ್ತ್ರವನ್ನು ತಂದು ನೀಡುವುದು ಪರಂಪರೆ. ಈ ಬಾರಿ ಮುಖ್ಯ ಮಂತ್ರಿ ಶ್ರೀ ಚಂದ್ರಬಾಬು ನಾಯುಡು ಅವರು ಶನಿ ವಾರ ಸಂಜೆ ಈ ರೇಷ್ಮೆ ವಸ್ತ್ರಗಳನ್ನು ತಲೆಯಮೇ ಲಿಟ್ಟುಕೊಂಡು ತೆಗೆದುಕೊಂಡುಬಂದು ಸ್ವಾಮಿಗೆ ಸಮರ್ಪಿಸಿದರು. ಸತೀ ಸಮೇತರಾಗಿ ಆಗಮಿ ಸಿದ ಅವರು ಸ್ವಾಮಿಗೆ ವಸ್ತ್ರ ಸಮರ್ಪಿಸಿದ ಮೇಲೆ ಅದನ್ನು ಸ್ವಾಮಿಯ ಪಾದಗಳಲ್ಲಿಟ್ಟು ನಂತರ ಆರತಿ ಮಾಡಲಾಯಿತು. ಮುಖ್ಯಮಂತ್ರಿಗಳಿಗೆ ಶೇಷವಸ್ತ್ರ ಬಹುಮಾನ ನೀಡಲಾಯಿತು. ಅವರು ಗರ್ಭಗು ಡಿಯ ಪ್ರದಕ್ಷಿಣೆ ಮಾಡಿ ಹುಂಡಿಯಲ್ಲಿ ಕಾಣಿಕೆಯನ್ನ ರ್ಪಿಸಿದರು. ರಂಗನಾಯಕ ಮಂಟಪದಲ್ಲಿ ಮುಖ್ಯ ಮಂತ್ರಿಗಳಿಗೆ ವೇದಾಶೀರ್ವಚನ ನೀಡಲಾಯಿತು. ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಪ್ರಸಾದಗ ಳನ್ನು ಶ್ರೀಯುತರಿಗೆ ನೀಡಿದರು.

ತೆಲುಗು ಗಂಗೆಯ ಮೂಲಕ ತಿರುಪತಿಗೆ ಕುಡಿ ಯುವ ನೀರು ಸರಬರಾಜು ಮಾಡುವ ಯೋಜ ನೆಗೆ ಸೆಪ್ಟಂಬರ್ 30 ರಂದು ತಿರುಪತಿಯ ಜಯ ಭಾರತ್ ವೃತ್ತದ ಬಳಿ, ಆಂಧ್ರಪ್ರದೇಶದ ಮುಖ್ಯ ಮಂತ್ರಿ ಶ್ರೀ ಎನ್. ಚಂದ್ರಬಾಬುನಾಯುಡು ಅವರು ಶಂಕುಸ್ಥಾಪನೆ ಮಾಡಿದರು. ಶ್ರೀಕಾಳಹಸ್ತಿ ಸಮೀ ಪದ ಕಂಡಲೇರು - ಪೂಂಡಿ ಕಾಲುವೆಯಿಂದ 0.50 ಟಿ.ಎಂ.ಸಿ. ನೀರನ್ನು ಕೊಳವೆಗಳ ಮೂಲಕ ತಿರುಪ ತಿಗೆ ತಂದುಕೊಡುವ ಈ ಯೋಜನೆಯ ಅಂದಾಜು ವೆಚ್ಚ ಸುಮಾರು 25 ಕೋಟಿರೂಪಾಯಿಗಳು.

ತಿರುಮಲೆಯಲ್ಲಿನ ಸಪ್ತಗಿರಿ ಸತ್ರಗಳಲ್ಲಿನ "ಕಾವೇರಿ" ವಿಭಾಗವನ್ನು ಮುಖ್ಯಮಂತ್ರಿಗಳು ಆರಂ ಭಗೊಳಿಸಿಕೊಟ್ಟಿದ್ದಾರೆ. ಸುಮಾರು ಕೋಟಿ ರೂಪಾ ಯಿಗಳ ವೆಚ್ಚದಲ್ಲಿ ತಿ.ತಿ.ದೇ. ನಿರ್ಮಿಸಿದ ಈ ವಿಭಾ ಗದಲ್ಲಿ ನೂರು ಕೋಣೆಗಳು ಇದ್ದು, ತಿರುಮಲೆಗೆ ಬರುವ ಯಾತ್ರಿಕರಿಗೆ ಈ ಕೋಣೆಗಳನ್ನು ಉಚಿತ ವಾಗಿ ನೀಡಲಾಗುವುದು.

ಹಿಂದಿನ ವರ್ಷದ ಬ್ರಹ್ಮೋತ್ಸವದ ಆಡಿಯೋ ಕ್ಯಾಸೆಟ್ ಅನ್ನು ಮುಖ್ಯಮಂತ್ರಿಯವರು ಸೆಪ್ಟಂಬರ್ 30 ರಂದು ತಿರುಮಲೆಯಲ್ಲಿ ಬಿಡುಗಡೆಮಾಡಿ ದರು. ಹೈದರಾಬಾದಿನ ಪ್ರತಿಮಾ ವೀಡಿಯೋಸ್

# A HEALING TOUCH

## T. T. DEVASTHANAMS INTRODUCES
## SRI BALAJI AROGYAVARAPRASADINI SCHEME

For ages, Tirumala, the abode of Lord Venkateswara has been a great centre of pilgrimage. Thousands of devotees visit the sacred hills every day and offer their solemn prayers to the Lord for their spiritual and physical well-being.

Alleviating human suffering has been a part of dedicated efforts of TTD to the mankind. TTD already manages a Leprosorium, centre for physically handicapped, a poor home and a social central hospital. To provide the most advanced medical technology to the needy, the TTD has launched another monument, a blessing from the Lord by opening Sri Venkateswara Institute of Medical Sciences -- a sophisticated super speciality centre on the lines of AIIMS of New Delhi, JIPMER of Pondicherry and PGI of Chandigarh. Total well being of man is the aim of Sri Venkateswara Institute of Medical Sciences which apart from offering service, training and education in medical sciences also encourages Research and development.

The doors to such a state of the art technology should be open to our poor and diseased brethren.

With a view to achieving this, Sri Venkateswara Institute of Medical Sciences has introduced a New scheme Balaji Arogyavaraprasadini Scheme. To accomplish the goal of proving the sophisticated medical technology to every individual at an affordable rate, we invite the generous co-operation of philanthropists and the general public.

### The Scheme in essence:

A donor can make an endowment of Rs 1000/- or multiples thereof (Rs 1 lakh, Rs 5 lakhs, Rs 10 lakhs) to T.T. Devasthanams which will in turn contribute matching grant. The entire amount will be deposited in fixed deposit in a nationalised Bank and the interest accrued on it will be utilised for providing free medical services to the poor and the needy.

A Chair in Sri Venkateswara Institute of Medical Sciences will be named after the donor who contributes Rs 10 lakhs or above. These endowment chairs are purely research oriented.

* Donations can be made by any individual / family / company / firms etc.
* The name of the donor who endows Rs 5 lakhs or more will be displayed prominently in the Reception hall of the hospital.
* The discharge ticket of the benefited patient will carry the name of the donor.

### Additional Benefit and facilities :

* Donations to Sri balaji Arogyavaraprasadini Scheme are exempted from Income Tax under 80 G.
* Paid rooms / Air conditioned rooms will be allotted to family members of the donor in the hospital.
* Paid rooms can be named after donors who contribute a sum of Rs 5 lakhs or above.
* By paying Rs 5 lakhs and above, a donor may sponsor one operation per year.
* Donors can sponsor feeding of the In-patients and out-patients. They may also sponsor a travel fellowship for the faculty per year.

All donations, by D Ds drawn in favour of The Executive Officer, T T Devasthanams Tirupati-517 501 (Andhra Pradesh) should reach the Director, Sri Venkateswara Institute of Medical Sciences Tirupati along with the following particulars:

* Name and address along with the latest passport-size photographs of the family members of the donor who contributes Rs 1 lakh or more.
* Name and address of the person to whom Income Tax Exemption Certificate is to be issued.

The donors are also welcome to offer equipment, vehicles etc to SVIMS or even sponsor health camps in rural areas if they so desire. Further details can be had from

**The Executive Officer**
**T.T. Devasthanams, Tirupati**
**or**
**The Director**
**Sri Venkateswara Institute of Medical Sciences, Tirupati**

**EXECUTIVE OFFICER**



Goddess Mahalakshmi of Kolhapur (Maharashtra)

*Visit....*

# SRI PADMAVATHI DEVI TEMPLE

## TIRUCHANUR



### TEMPLE TIMINGS ON FRIDAYS

| | | | | |
|---|---|---|---|---|
| 5-00 a.m. | to | 5-30 a.m. | — | SUPRABHATAM |
| 5-30 a.m. | to | 6-30 a.m. | — | Sahasranama Archana<br>Nitya Archana & 1st Bell |
| 6-30 a.m. | to | 7-00 a.m. | — | Sadalimpu |
| 7-00 a.m. | to | 8-00 a.m. | — | ABHISHEKAM |
| 8-00 a.m. | to | 9-00 a.m. | — | Alankaram to Moolavarlu<br>2nd Bell |
| 9-00 a.m. | to | 8-00 p.m. | — | SARVADARSANAM |
| 6-00 p.m. | to | 8-00 p.m. | — | Procession and Unjal Seva |
| 8-00 p.m. | to | 8-30 p.m. | — | Night Kainkaryams & Night Bell |
| 8-30 p.m. | to | 9-00 p.m. | — | SARVADARSANAM |
| 9-00 p.m. | | | | Suddhi & Ekanta Seva |

***Note :***

7-00 a.m. to 8-00 a.m. — Grihasthas can participate in Abhishekam by paying Rs. 100/- per head.

Abhisheka Darsanam can be had on payment of Rs. 5/- per head.




ನೆರವಿನಿಂದ ತಿ. ತಿ. ದೇ. ವೆಂಕಟೇಶ್ವರ ರೆಕಾರ್ಡಿಂಗ್ ವಿಭಾಗದವರು ಈ ಕಾಸೆಟ್ ಅನ್ನು ರೂಪಿಸಿದ್ದು ಇದರ ಪ್ರಥಮ ಪ್ರತಿಯನ್ನು ಮುಖ್ಯ ಮಂತ್ರಿಗಳು ದೇವಾದಾಯ ಮಂತ್ರಿಗಳಿಗೆ ನೀಡುವುದರಿಂದ ಬಿಡುಗಡೆ ಮಾಡಿದರು.

ತಿರುಮಲೆಯ ಸ್ವಾಗತ ಕಚೇರಿಯಲ್ಲಿ ವಸತಿ ವಿತರಣೆಗಾಗಿ ಕಂಪ್ಯೂಟರ್‌ಗಳನ್ನು ಬಳಸುವಿಕೆಯನ್ನು ಮುಖ್ಯಮಂತ್ರಿಯವರು ಶನಿವಾರ ರಾತ್ರಿ ಆರಂಭಿಸಿಕೊಟ್ಟರು. ಇದರಿಂದ ತಿರುಮಲೆಯ ಯಾತ್ರಿಕರಿಗೆ ವಸತಿ ನೀಡುವುದು ಮತ್ತಷ್ಟು ಸುಲಭವಾಗಿ, ಹೆಚ್ಚು ಹೆಚ್ಚು ಸಾದಾ ಸೀದಾಗೊಳಿಸುವಲ್ಲಿ ನೆರವಾಗುವುದು. ಮುಖ್ಯಮಂತ್ರಿಗಳು ಟಿ.ಬಿ.ಸಿ. ಪ್ರಾಂತ್ಯದ ಕಂಪ್ಯೂಟರ್ ವಸತಿ ವಿತರಣೆಯ ಪದ್ಧತಿಯೂ, ಆರ್ಜಿತ ಸೇವೆಗಳ ಟಿಕೆಟ್‌ಗಳ ಕಂಪ್ಯೂಟರ್ ವಿಕ್ರಯವನ್ನೂ ಪರಿಶೀಲಿಸಿದರು.

ತಿರುಪತಿಯ ಸ್ವಿಮ್ಸ್ ಆಸ್ಪತ್ರೆಯ ಎದುರು ತಿ. ತಿ. ದೇವಸ್ಥಾನಗಳು 3.6 ಕೋಟಿ ರೂಪಾಯಿ ವೆಚ್ಚದಲ್ಲಿ ನೂತನವಾಗಿ ನಿರ್ಮಿಸಿದ ಭವನದಲ್ಲಿ ಶ್ರೀ ಬಾಲಾಜಿ ವಿಕಲಾಂಗ ಆಸ್ಪತ್ರೆಯನ್ನು ಆರಂಭಿಸಲಾಗಿದೆ. 1984 ರಲ್ಲಿ ತಿರುಪತಿಯ ತಿ.ತಿ. ದೇ. ಪರಿಪಾಲನಾಭವನದ ಒಂದು ಭಾಗದಲ್ಲಿ 50 ಹಾಸಿಗೆಗಳಿಂದ ಆರಂಭವಾದ ಈ ಆಸ್ಪತ್ರೆ (ಬರ್ಡ್) 150 ಹಾಸಿಗೆಗಳ ಆಸ್ಪತ್ರೆಯಾಗಿ, ಅಂತರಾಷ್ಟ್ರೀಯ



ಸಂದರ್ಶಿಸಿ                                                                                    ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾಪಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ**
**ರಾತ್ರಿ ೮ ರ ವರೆಗೆ**

**ಟಿಕೆಟ್ ರೂ. ೧--೦೦ (ಹಿರಿಯರಿಗೆ)**
**" " ೦--೫೦ (ಕಿರಿಯರಿಗೆ)**

ಖ್ಯಾತಿಯ ಡಾ|| ವ್ಯಾಘ್ರೇಶ್ವರುಡು ಅವರ ಆಶಯಗಳಿಗೆ ಅನುಗುಣವಾಗಿ ಬೆಳೆದ ಮೇಲೆ, ಅದಕ್ಕೆ ಒಂದು ಸ್ವತಂತ್ರ ಭವನದ ಅಗತ್ಯವನ್ನು ಕಂಡುಕೊಂಡು ಈ ಹೊಸ ಭವನವನ್ನು ನಿರ್ಮಿಸಲಾಯಿತು. ಬ್ರಹ್ಮೋತ್ಸವಗಳ ಸಮಯದಲ್ಲಿ ಮುಖ್ಯಮಂತ್ರಿಯವರ ಅಮೃತಹಸ್ತಗಳಿಂದ ಈ ಸ್ಥಳಪರಿವರ್ತನೆ ನಡೆಯಿತು. ಮುಖ್ಯಮಂತ್ರಿಗಳು ಆಸ್ಪತ್ರೆಯ ಹೊಸ ಭವನದಲ್ಲಿ ಕೆಲಕಾಲ ಕಳೆದದ್ದೇ ಅಲ್ಲದೆ ಅಲ್ಲಿನ ವಿಕಲಾಂಗರಿಗೆ ಬೂಟು, ಮೊದಲಾದ ಪರಿಕರಗಳನ್ನು ಹಂಚಿಕೆ ಮಾಡಿಕೊಟ್ಟರು.

ಭಾನುವಾರ ಬೆಳಗ್ಗೆ ತಿರುಮಲೆಯಲ್ಲಿ ಮುಖ್ಯಮಂತ್ರಿ ಶ್ರೀ ಎನ್. ಚಂದ್ರಬಾಬುನಾಯ್ಡು ಅವರು ತಮ್ಮ ಸತೀಮಣಿ ಶ್ರೀಮತಿ ಭುವನೇಶ್ವರಿ ಅವರೊಂದಿಗೆ ವೈಕುಂಠಂ ಸರತಿಯ ಸಾಲಿನ ಮೂಲಕ ಕ್ಯೂನಲ್ಲಿ ಹೊರಟು ಸ್ವಾಮಿಯನ್ನು ದರ್ಶಿಸಿದರು. ಅವರನ್ನು ತಿ.ತಿ.ದೇ. ಇ.ಓ. ಶ್ರೀ ಎನ್. ರಮೇಶ್‌ಕುಮಾರ್, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಮೊದಲಾದವರು ಸ್ವಾಗತಿಸಿದರು. ತಿರುಮಲೆಯಲ್ಲಿನ ಬ್ರಹ್ಮೋತ್ಸವದ ಏರ್ಪಾಡುಗಳು, ಯಾತ್ರಿಕ ಸೌಕರ್ಯಗಳ ಬಗ್ಗೆ ಮುಖ್ಯಮಂತ್ರಿಯವರು ಕಾರ್ಯನಿರ್ವಹಣಾಧಿಕಾರಗಳನ್ನು ಕೇಳಿ ತಿಳಿದರು. ಉತ್ಸವಕ್ಕಾಗಿ ಏರ್ಪಡಿಸಿದ್ದ ಗ್ಯಾಲರಿಗಳು, ಸ್ವಾಗತದ ಸಪ್ತದ್ವಾರಗಳನ್ನೂ ಪರಿಶೀಲಿಸಿದರು.

## ಬ್ರಹ್ಮೋತ್ಸವದ ಆದಾಯ ವಿವರ

ಸೆಪ್ಟಂಬರ್ 25 ರಿಂದ ಅಕ್ಟೋಬರ್ 4 ರ ವರೆಗೆ ತಿರುಮಲೆಯಲ್ಲಿ ಸ್ವಾಮಿ ಬ್ರಹ್ಮೋತ್ಸವಗಳು ಯಶಸ್ವಿಯಾಗಿ ನಡೆದದ್ದೇ ಅಲ್ಲದೆ ಅನೇಕ ಹೊಸ ದಾಖಲೆಗಳನ್ನೂ ಉಂಟುಮಾಡಿತು. ಅವುಗಳ ವಿವರ ಪಟ್ಟಿಯನ್ನು ಇಲ್ಲಿ ನೀಡಲಾಗಿದೆ.

| | 1994 | 1995 |
|---|---|---|
| ಒಟ್ಟು ಆದಾಯ | 2,22,99,283 ರೂ. | 2,69,09,123 ರೂ. |
| ಇದರಲ್ಲಿ ಹುಂಡಿಯ ಪಾಲು | 1,75,66,518 ರೂ. | 2,15,72,353 ರೂ. |
| ಆರ್ಜಿತ ಸೇವೆಗಳು | 47,32,765 ರೂ. | 53,36,770 ರೂ. |
| 30 ರೂಪಾಯಿ ಟಿಕೆಟ್ ಮೂಲಕ | 1,18,200 | 1,36,524 |
| ನಿತ್ಯಾನ್ನದಾನದಲ್ಲಿನ ಭಕ್ತರು | 1,59,000 | 1,92,000 |
| ಕಲ್ಯಾಣಕಟ್ಟೆಯಲ್ಲಿ ಮುಡಿಯನ್ನು ನೀಡಿದವರು | 1,34,000 | 1,70,202 |

ಈ ಮೂಲಕವಾಗಿ ಹೆಚ್ಚಿದ ಆದಾಯ ನಲವತ್ತಾರು ಲಕ್ಷ ಒಂಬತ್ತು ಸಾವಿರದ ಎಂಟುನೂರ ನಲವತ್ತು ಮೂರು ರೂಪಾಯಿಗಳೂ, ಸ್ವಾಮಿದರ್ಶನ ಪಡೆದವರ ಸಂಖ್ಯೆ ಒಂದು ಲಕ್ಷ ಮುವತ್ತೇಳು ಸಾವಿರದ ಏಳುನೂರ ಎಂಟು ಮಂದಿ ಹೆಚ್ಚಾಗಿರುವುದನ್ನು ಗಮನಿಸಬಹುದು.






### ಚಿತ್ರ ಸೂಚಿ

ಪುಟ - 17
1. ಉತ್ಸವರು. 2. ಹಂಸವಾಹನ. 3. ಗರುಡವಾಹನ.

ಪುಟ - 18
1. ಕನಕರಥ. 2.ದಾರುರಥೋತ್ಸವ. 3. ಗ್ಯಾಲರಿಯಲ್ಲಿ ಜನಸಂದಣಿ.

ಪುಟ - 19
ಫಲ, ಪುಷ್ಪ ವನ ಮೂಲಿಕಾ ಪ್ರದರ್ಶನದ 3 ನೋಟ.

ಪುಟ - 20
1. ಗರುಡೋತ್ಸವಕ್ಕೆಂದು ಸ್ವಾಮಿಗೆ ರೇಷ್ಮೆವಸ್ತ್ರ ತರುತ್ತಿರುವ ಮುಖ್ಯಮಂತ್ರಿ ದಂಪತಿಗಳು. 2. ಮುಖ್ಯಮಂತ್ರಿಗಳಿಗೆ ಸ್ವಾಮಿ ಪ್ರಸಾದ ವಿತರಣೆ. 3. ಧ್ವಜಸ್ಥಂಭದ ಬಳಿ ಮುಖ್ಯಮಂತ್ರಿಗಳು.

ಪುಟ - 21
1. ತಿರುಪತಿಯಲ್ಲಿ ಕುಡಿಯುವ ನೀರಿನ ಯೋಜನೆಯ ಶಂಕುಸ್ಥಾಪನೆ. 2. 'ಬರ್ಡ್' ನೂತನ ಭವನದ ಆರಂಭೋತ್ಸವ.

ಪುಟ - 23
1. ಸಪ್ತಗಿರಿ ಸತ್ರಗಳಲ್ಲಿ ಕಾವೇರಿ ವಿಭಾಗದ ಆರಂಭೋತ್ಸವ. 2. ಬರ್ಡ್‌ನ ನೂತನ ಭವನದಲ್ಲಿ ದೀಪ ಹಚ್ಚುವಿಕೆ.

# ತಿರುಮಲೆ -- ತಿರುಪತಿ ದೇವಸ್ಥಾನಗಳು -- ತಿರುಪತಿ.

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನಿ ಯೋಜನೆ

ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಯಿರುವ ತಿರುಮಲೆ ಪ್ರಾಚೀನ ಕಾಲದಿಂಲೂ ಯಾತ್ರಿಕರ ಆಕರ್ಷಣಕೇಂದ್ರವಾಗಿದೆ. ಪ್ರತಿದಿನವೂ ಸಾವಿರಾರು ಮಂದಿ ಭಕ್ತ ಯಾತ್ರಿಕರು ತಮ್ಮ ಐಹಿಕ ಆಧ್ಯಾತ್ಮಿಕ ಅಭಿವೃದ್ಧಿಗಾಗಿ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ತಿ. ತಿ. ದೇವಸ್ಥಾನಗಳು ಮಾನವಸೇವೆಯಲ್ಲಿ ಶ್ರದ್ಧಾಪೂರ್ವಕವಾಗಿ ಭಾಗವಹಿಸುವ ಪರಂಪರೆಯನ್ನು ಹೊಂದಿದೆ. ಕುಷ್ಠರೋಗ ನಿವಾರಣಾಕೇಂದ್ರ, ಅಂಗವಿಕಲರ ಅಭಿವೃದ್ಧಿ ಕೇಂದ್ರ, ಅನಾಥ ಶರಣಾಲಯ, ಕೇಂದ್ರ ಆಸ್ಪತ್ರೆ ಮೊದಲಾದವನ್ನು ತಿ.ತಿ.ದೇ. ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಜನಕ್ಕೆ ವಿಶೇಷ ಆಧುನಿಕ ವೈದ್ಯಕೀಯ ಸೇವೆ ಸಲ್ಲಿಸಲು ಸ್ವಾಮಿಯ ಆಶೀರ್ವಾದದ ದೆಂಬಲದಿಂದ ಶ್ರೀ ವೆಂಕಟೇಶ್ವರ ವೈದ್ಯಕೀಯ ಸಂಸ್ಥೆ (ಸ್ವಿಮ್ಸ್)ಯನ್ನು -- ದೆಹಲಿ, ಅಜ್ಮೀರ, ಪಾಂಡಿಚೇರಿ, ಚಂಡೀಘರ್‌ಗಳ ಆಲಿಂಡಿಯಾ ಇನ್ಸ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಮಾದರಿಯಲ್ಲಿ ಆರಂಭಿಸಲಾಗಿದೆ. ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆಯ ಮೂಲ ಉದ್ದೇಶ -- ಮನುಷ್ಯನ ಸರ್ವಾಂಗೀಣ ಆರೋಗ್ಯಸಾಧನೆ -- ಇಲ್ಲಿ ವೈದ್ಯಸೇವೆ, ವೈದ್ಯವಿಜ್ಞಾನದ ಶಿಕ್ಷಣ -- ತರದೇತಿಗಳೊಡನೆ ಸಂಶೋಧನೆ ಅಭಿವೃದ್ಧಿಯನ್ನೂ ನಡೆಸಲಾಗುವುದು.

ಇಂತಹ ವೈದ್ಯವಿಜ್ಞಾನದ ಬಾಗಿಲು ನಮ್ಮಲ್ಲಿನ ಎಲ್ಲರಿಗೂ ತೆರೆದಿರಬೇಕು. ಅದನ್ನು ಸಾಧಿಸಲೆಂದೇ ಶ್ರೀ ಬಾಲಾಜಿ ಆರೋಗ್ಯವರ ಪ್ರಸಾದಿನಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ವಿಶೇಷ ತಜ್ಞ ವೈದ್ಯಕೀಯ ಸೇವೆಯು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಲು ದಾನಿಗಳಿಂದಲೂ ಸಾರ್ವಜನಿಕರಿಂದಲೂ ಉದಾರವಾದ ದೇಣಿಗೆಗಳನ್ನು ನಿರೀಕ್ಷಿಸಲಾಗಿದೆ.

ಯೋಜನೆಯ ಸಾರಾಂಶ ಹೀಗಿದೆ :---

* ದಾನಿಗಳು ರೂ 1000-- ಅಥವಾ ಗುಣಕಗಳಲ್ಲಿ ದಾನ ನೀಡಬಹುದು. ಅದಕ್ಕೆ ಸಮನಾದ ಧನವನ್ನು ತಿ.ತಿ.ದೇ. ಸೇರಿಸಿ ಮೊತ್ತದ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿರಿಸಿ ಅದರ ಬಡ್ಡಿಯನ್ನು ಬಡವರ, ವೈದ್ಯಕೀಯ ಚಿಕಿತ್ಸೆಗಾಗಿ ಬಳಸಲಾಗುವುದು.
* ಹತ್ತು ಲಕ್ಷ ಹಾಗೂ ಹೆಚ್ಚಿನ ಧನವನ್ನು ನೀಡುವವರ ಹೆಸರಿನಲ್ಲಿ ಒಂದು ಸಂಶೋಧನ ಪೀಠವನ್ನು ಸ್ಥಾಪಿಸಲಾಗುವುದು.
* ದಾನವನ್ನು ವ್ಯಕ್ತಿ / ಕುಟುಂಬ / ಕಂಪನಿ / ಯಾರಾದರೂ ಮಾಡಬಹುದು.
* ಐದು ಲಕ್ಷ ರೂಗಳಿಗಿಂತ ಹೆಚ್ಚಿಗೆ ದಾನ ನೀಡುವವರ ಹೆಸರನ್ನು ಸಂಸ್ಥೆಯ ಸ್ವಾಗತಕಚೇರಿಯಲ್ಲಿ ಬರೆದು ಪ್ರದರ್ಶಿಸಲಾಗುವುದು.
* ಪ್ರಯೋಜನ ಪಡೆದು ಆರೋಗ್ಯಹೊಂದಿದವರ ಡಿಸ್ಚಾರ್ಜ್ ಚೀಟಿಯಲ್ಲಿ ದಾನಿಗಳ ಹೆಸರನ್ನು ನಮೂದು ಮಾಡಲಾಗುವುದು.

## ದಾನಿಗಳಿಗೆ ನೀಡಲಾಗುವ ಸೌಕರ್ಯಗಳು :

* ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನಿ ಯೋಜನೆಗೆ ನೀಡಲಾದ ದಾನ 80 ಜಿ. ಕಲಮಿನನ್ವಯ ಆದಾಯಕರ ಮುಕ್ತ.
* ಆಸ್ಪತ್ರೆಯಲ್ಲಿ ದಾನಿಗಳ ಕುಟುಂಬಕ್ಕೆ ಬಾಡಿಗೆ ಕೋಣೆ ಹವಾನಿಯಂತ್ರಿತ ಕೋಣೆಗಳನ್ನು ನೀಡಲಾಗುವುದು
* 5 ಲಕ್ಷ ಮತ್ತು ಹೆಚ್ಚಿನ ಹಣದ ದಾನಿಗಳ ಹೆಸರಿನಲ್ಲಿ ಬಾಡಿಗೆ ಕೋಣೆಗಳನ್ನೂ ನಿರ್ಮಿಸಲಾಗುವುದು.
* 5 ಲಕ್ಷ ಹಾಗೂ ಹೆಚ್ಚಿನ ಹಣದ ದಾನದಿಂದ ದಾನಿಗಳು ಪ್ರತಿವರ್ಷ ಒಂದು ಚಿಕಿತ್ಸೆಯನ್ನು ಪ್ರಾಯೋಜಿತಗೊಳಿಸಬಹುದು.
* ದಾನಿಗಳು ಒಳರೋಗಿಗಳ, ಹೊರರೋಗಿಗಳ, ಆಹಾರಕ್ಕಾಗಿಯೂ ನೀಡಬಹುದು. ಸಂಸ್ಥೆಯಲ್ಲಿನ ವಾರ್ಷಿಕ ಸಾರಿಗೆ ವೆಚ್ಚಗಳಿಗೂ ನೀಡಬಹುದು.

  ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು -- ನಿರ್ದೇಶಕರು ಶ್ರೀ ವೆಂಕಟೇಶ್ವರ ಇನ್ಸ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ -- ಇವರಿಗೆ ಕಳುಹಿಸುತ್ತ ಜೊತೆಗೇ ಕೆಳಕಂಡ ವಿವರಗಳನ್ನೂ ಎಲ್ಲ ದಾನಿಗಳೂ ನೀಡಬೇಕು.
* ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಹಣ ದಾನಮಾಡುವವರ ಹೆಸರು ವಿಳಾಸಗಳೊಡನೆ ಅವರ ಮನೆಯ ಎಲ್ಲ ಸದಸ್ಯರ ಪಾಸ್‌ಪೋರ್ಟ್ ಸೈಜಿನ ಈಚಿನ ಭಾವಚಿತ್ರ ವಿರಬೇಕು.
* ಆದಾಯತೆರಿಗೆ ವಿನಾಯತಿಯ ಪ್ರಮಾಣ ಪತ್ರವನ್ನು ಯಾರ ಹೆಸರಿಗೆ ನೀಡಬೇಕು ಎಂಬುದು.
* ದಾನಿಗಳು ಇತರತ್ರ ಯಂತ್ರ ಉಪಕರಣಗಳನ್ನು ನೀಡಲೂ ಅವಕಾಶವಿದೆ, ಅಥವಾ ವಾಹನಗಳನ್ನೂ ನೀಡಬಹುದಾಗಿದೆ. ಗ್ರಾಮೀಣ ಪ್ರಾಂತ್ಯಗಳಲ್ಲಿ ತಿ. ತಿ. ದೇವಸ್ಥಾನಗಳ ಆರೋಗ್ಯವಿಸ್ತರಣಾ ಶಿಬಿರಗಳನ್ನೂ ಪ್ರಾಯೋಜಿತಗೊಳಿಸಬಹುದು.

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ, ತಿರುಪತಿ, ದೇವಸ್ಥಾನಗಳು -- ತಿರುಪತಿ.

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸಿಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ.

# ನಾಯಿಕಾಭಾವ

## ಮೊದಲಾಳ್ವಾರ್ ಮತ್ತು ತಿರುಮಳಿಶೈ ಆಳ್ವಾರ್ ಪ್ರಬಂಧಗಳಲ್ಲಿ

---ಎಂ. ಆರ್. ನರಸಿಂಹನ್.



ವಿಶಿಷ್ಟಾದ್ವೈತ ಸಿದ್ಧಾಂತವು ಮೂರು ಮೂಲ ತತ್ತ್ವಗಳ ಮೇಲೆ ಆಧಾರಿತವಾಗಿದೆ. ಅವೇ ಚಿತ್, ಅಚಿತ್ ಮತ್ತು ಈಶ್ವರ. ಚಿತ್ ಎಂದರೆ ಚೈತನ್ಯಜ್ಞಾನಪೂರ್ಣವಾದ ಜೀವಾತ್ಮ, ಅಚಿತ್ ಎಂದರೆ ಈ ಜೀವಾತ್ಮಕ್ಕೆ ಭೋಗ್ಯೋಪಕರಣಗಳಾಗಿ ಕಲ್ಪಿಸಲ್ಪಟ್ಟಿರುವ ಅಚೇತನ ಅಥವಾ ಜಡ ಪ್ರಾಪಂಚಿಕ ವಸ್ತುಗಳು ಅಥವಾ ಮೂಲ ಪ್ರಕೃತಿಗಳು. ಪರಮಾತ್ಮನೇ ಈ ಪ್ರಪಂಚದ ಆಗು ಹೋಗುಗಳ ಸೂತ್ರಧಾರ. ಅವನ ಇಚ್ಛೆ ಅಥವಾ ಸಂಕಲ್ಪದಂತೆ ಚಿತ್ ಅಚಿತ್ ಪೂರ್ಣವಾದ ಈ ಜಗದ್ವ್ಯಾಪಾರವು ನಡೆಯುವುದು. ನಮ್ಮ ಗಮನವೀಗ ಜೀವಾತ್ಮ ಮತ್ತು ಪರಮಾತ್ಮ ಅಥವಾ ಈಶ್ವರ ಇವರಿಗೆ ಸೀಮಿತವಾದದ್ದು. ಇವು ಒಂದನ್ನೊಂದು ಬಿಟ್ಟಿರದು. ಏತಕ್ಕೆಂದರೆ ಜೀವಾತ್ಮನ ಗುರಿ ಪರಮಾತ್ಮಸಾಧನೆ. ಪರಮಾತ್ಮನ ದಯೆಯನ್ನು ಸಂಪಾದಿಸಿಕೊಂಡು ತಮ್ಮ ಜನ್ಮಚಕ್ರವನ್ನು ನಾಶಪಡಿಸಿಕೊಂಡು ಮೋಕ್ಷವನ್ನು ಗಳಿಸಿಕೊಳ್ಳುವುದೇ. ಈ ಜೀವರನ್ನು ಮುಮುಕ್ಷು ಎನ್ನುತ್ತಾರೆ. ಈ ಸಾಧನೆಯೇ ಭಕ್ತಿ ಎಂದು ಕರೆಯಲ್ಪಡುತ್ತಿದೆ. ಈ ಭಕ್ತಿಮಾರ್ಗದ ಒಂದು ಮಜಲೇ ಪ್ರಪತ್ತಿ. ಪ್ರಪತ್ತಿ ಮಾರ್ಗವೇ ಶ್ರೀ ವೈಷ್ಣವನ ಅತ್ಯಂತ ಆಪ್ತವಾದ ಸಿದ್ಧೋಪಾಯ. ಇದರ ಪ್ರಕಾರ ಜೀವಾತ್ಮನು ತನ್ನ ಸರ್ವಸ್ವವನ್ನೂ ಪರಮಾತ್ಮನಿಗೆ ಸಮರ್ಪಿಸಿಕೊಳ್ಳುವುದು. ಈ ಮಾರ್ಗವನ್ನು ವ್ಯಾಖ್ಯಾನಿಸುವಾಗ ಶ್ರೀ ವೈಷ್ಣವ ತತ್ತ್ವ ನಿರೂಪಕರಾದ ಆಳ್ವಾರ್ ಆಚಾರ್ಯರುಗಳು 'ಪರಮಾತ್ಮನೊಬ್ಬನೇ ಪುರುಷ ಜೀವಾತ್ಮರೆಲ್ಲರೂ ಸ್ತ್ರೀಯರು. ಶ್ರೀಕೃಷ್ಣನನ್ನು ಗೋಪಸ್ತ್ರೀಯರು ಆಶ್ರಯಿಸಿ ಅವನ ಸಂಶ್ಲೇಷೆಯನ್ನು ಅನುಭವಿಸಿದಂತೆ' ಎಂಬುದಾಗಿ ನಿರೂಪಿಸಿದ್ದಾರೆ. ನವವಿಧ ಭಕ್ತಿಗಳಲ್ಲಿ ಒಂದಾದ ಆತ್ಮನಿವೇದನೆ ಅಥವಾ ಮಧುರ ಭಕ್ತಿಯೊಡನೆ ಇದು ಸಾರೂಪ್ಯಗೊಳ್ಳುತ್ತದೆ. ಈ ಭಕ್ತಿ ಮಾರ್ಗ, ಈ ಭಕ್ತಿಯ ಪರಾಕಾಷ್ಠೆ ರಾಮಾಯಣ, ಭಾಗವತಾದಿ ಇತಿಹಾಸ ಗ್ರಂಥಗಳಲ್ಲಿ ವಿಶದಗೊಂಡಿರುವುದರಿಂದಲೇ ಆ ಗ್ರಂಥಗಳು ಶ್ರೀ ವೈಷ್ಣವರಿಗೆ ಪರಮಪೂಜ್ಯವೆನಿಸಿ ತಮ್ಮ ತತ್ತ್ವನಿರೂಪಣೆಗೆ ಪ್ರಮಾಣಗ್ರಂಥಗಳಾಗಿ ಮೆರೆದಿವೆ. ರಾಮಾಯಣದಲ್ಲಿ ಕಾಡಿನಲ್ಲಿದ್ದ ಋಷಿಗಳು ಶ್ರೀರಾಮಚಂದ್ರನ "ಸಾಕ್ಷಾನ್ಮನ್ಮಥ ಮನ್ಮಥಃ" ಎಂಬುವಂತಹ ದಿವ್ಯಸುಂದರ ಪುರುಷ ವಿಗ್ರಹವನ್ನು ಕಂಡು ಆಕರ್ಷಿತರಾಗಿ "ಅಯ್ಯೋ ನಾವು ಸ್ತ್ರೀಯರಾಗಿ ಜನಿಸಿ ಅವನೊಡನೆ ಸಂಶ್ಲೇಷೆಯ ಭಾಗ್ಯವನ್ನು ಹೊಂದಲಿಲ್ಲವಲ್ಲ" ಎಂದು ಪರಿತಪಿಸಿದ



ರಂತೆ! ಈ ಇಂಗಿತವನ್ನು ಅರಿತ ಪರಮಾತ್ಮನು ಅವರ ಉತ್ಕಟೇಚ್ಛೆಯನ್ನು - ಆ ಋಷಿಗಳು ಗೋಪಸ್ತ್ರೀಯರಾಗಿ ಜನಿಸುವಂತೆ ಏರ್ಪಡಿಸಿ ಕೃಷ್ಣಾವತಾರ ಕಾಲದಲ್ಲಿ ಅವರೊಡನೆ ರಮಿಸಿ ಪೂರೈಸಿದನು ಎಂಬುದಾಗಿ ಶ್ರೀ ವೈಷ್ಣವ ತತ್ತ್ವ ಸಾಹಿತ್ಯದಲ್ಲಿ ನಿರೂಪಣೆ ಇದೆ. ಇದೊಂದು ವಿಲಕ್ಷಣ ಭಕ್ತಿಭಾವ ಎನಿಸಿದರೂ ಇದು ಭಕ್ತಿಯ ಉಚ್ಚತಮವಾದ ಮೆಟ್ಟಿಲೆಂಬುದಾಗಿ ಎಲ್ಲರಿಂದಲೂ ಮೆಚ್ಚಲ್ಪಟ್ಟು ಆಚರಣೆಗೆ ಆರಿಸಲ್ಪಟ್ಟಿದೆ. ಆಳ್ವಾರುಗಳು ತಮ್ಮ ದಿವ್ಯ ಪ್ರಬಂಧಗಳಲ್ಲಿ ಈ ತೆರನಾದ ಅನುಭಾವವನ್ನು ಅಲ್ಲಲ್ಲಿ ಮೆರೆಸಿದ್ದಾರೆ. ಇದನ್ನೇ ನಾಯಿಕಾಭಾವ ಎಂಬುದಾಗಿ ಲಾಕ್ಷಣಿಕರು ನಿರ್ದೇಶಮಾಡಿದ್ದಾರೆ.

ಆಳ್ವಾರ್ ದಿವ್ಯಪ್ರಬಂಧಗಳಲ್ಲಿ ಈ ಅನುಭಾವ ದರ್ಶನವನ್ನು ಹತ್ತು ಹಲವು ರೀತಿಯಿಂದ ವಿವರಿಸಿರುವುದನ್ನು ನಾವು ಕಾಣಬಹುದು.

ನಾಯಕಿಯೇ ತನ್ನ ವಿರಹವನ್ನು ತೋಡಿಕೊಳ್ಳುವುದು ಒಂದು ವಿಧವಾದರೆ ನಾಯಕಿಯ ತಾಯಿಯ ಮೂಲಕ ನಾಯಕಿಯನ್ನು ಅವಳ ಪ್ರಿಯಕರನು (ಇಲ್ಲಿ ಪರಮಾತ್ಮನು) ವಿರಹಬಾಧೆಗೆ ಸಿಲುಕಿಸಿ ದೂರ ತೆರಳಿರುವುದರ ನಿರೂಪಣೆ ಮತ್ತೊಂದು ತೆರ, ಇನ್ನೊಂದು ನಾಯಕಿಯ ಸಖಿಯ ಮಾತಿನ ಮೂಲಕ ನಾಯಕಿಯ ವಿರಹದ ಅವಸ್ಥೆಯ ನಿರೂಪಣೆ; ನಾಯಕಿಯು ಮೃಗಪಕ್ಷಿತರುಗುಲ್ಮಾದಿಗಳೊಡನೆ ತನ್ನ ವಿರಹಾವಸ್ಥೆಯನ್ನು ತೋಡಿಕೊಳ್ಳುವುದು ಇನ್ನೊಂದು ತೆರ; ಅವುಗಳ ದೌತ್ಯವಟ್ಟುವ ಮಾರ್ಗ ಮತ್ತೊಂದು ಮಾರ್ಗ; ನಿರ್ಜೀವ ವಸ್ತುವಾದ ಮೇಘವನ್ನು ಆಪ್ತನೆಂಬುದಾಗಿ ಭಾವಿಸಿ ತನ್ನ ವಿರಹಾತುರವನ್ನು ನಾಯಕನಿಗೆ ಸಂದೇಶದ ಮೂಲಕ ತಿಳಿಸುವ ರೀತಿ; ನಾಯಕನು ಇವುಗಳೊಂದಕ್ಕೂ ಮಣಿಯದೆ ತನ್ನೆಡೆಗೆ ಬಾರದೇ ಹೋದಾಗ ನಾಯಕಿಯು ಕಡೆಯ ಅಸ್ತ್ರವಾದ 'ಮಡಲ್' ಎಂಬುದನ್ನು ಪ್ರಯೋಗಿಸುವುದು. ಈ ಎಲ್ಲಾ ವಿಧಿವಿಧಾನಗಳೂ ಆಕರ್ಷಕವಾದ ಕಾವ್ಯಾಲಂಕಾರ ವಸ್ತು ಪರಿಕರಗಳನ್ನು ಹೊಂದಿರುವುದರಿಂದ ಇವುಗಳನ್ನು ತುಂಬಿ ತಮ್ಮ ಪ್ರಬಂಧಗಳ ಸೊಬಗನ್ನು ಉನ್ನತಸ್ತರಕ್ಕೊಯ್ದು ಆಳ್ವಾರುಗಳು ಭಕ್ತಿಭಾವದ ಪಾರವಶ್ಯತೆಯನ್ನು ಹೊರಸೂಸಿ ನಮ್ಮಗಳಲ್ಲೂ ಆ ಭಾವನೆಯನ್ನು ಪ್ರದೀಪ್ತಗೊಳಿಸುತ್ತಾರೆ. ಪರಮಾತ್ಮನನ್ನು ಒಂದು ಕ್ಷಣವೂ ಬಿಟ್ಟಿರಲಾರದ ಅವರ ದಿವ್ಯ ಅನುಭಾವದ ದರ್ಶನ ಈ ರೀತಿ ಆಳ್ವಾರುಗಳ ದಿವ್ಯ ಪ್ರಬಂಧಗಳಲ್ಲಿ ನಮಗೆ ಲಭ್ಯವಾಗುತ್ತದೆ. ಆ ಧನ್ಯ ಜೀವಿಗಳ ಸಾಹಿತ್ಯಾನುಭವದಿಂದ ನಮಗೂ ಪರಮಾತ್ಮನಲ್ಲಿ ಭಕ್ತಿಭಾವವು ಉತ್ಪನ್ನವಾಗಿ ಭಗವಲ್ಲಾ



ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ — ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ/ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ. (ಎಂ. ಓ. ಕೂಪನ್ನಿನ ವಿಷಯ ಬರೆಯುವ ಸ್ಥಳದಲ್ಲಿ)
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ಹೊಸ ಚಂದಾನಂಬರುಗಳನ್ನು ನೀಡಲಾಗಿದೆ. ದಯವಿಟ್ಟು ಗಮನಿಸಿ.
* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಹೊಸ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :
*ಸಪ್ತಗಿರಿ*
ತಿ.ತಿ.ದೇ., ತಿರುಪತಿ.

ಕೊಂಡು ಓದಿರಿ. ಕೊಂಡು ಓದಿಸಿರಿ.

ಭೇದ ಜ್ಞಾನದ ಸೊಡರು ಬೆಳಗಿ ಸಂಸ್ಕಾರವಂತರಾ ಗುತ್ತೇವೆ. ನಾವು ಪ್ರಪತ್ತಿಮಾರ್ಗ ಪ್ರವೇಶ ಹೊಂದಿ ಭಗವತ್ಕಟಾಕ್ಷಕ್ಕೆ ಪಾತ್ರರಾಗುತ್ತೇವೆ. ಇದೊಂದು ಆತ್ಮೋದ್ಧಾರ ಮಾಡಿಕೊಳ್ಳುವ ಸಾಧನ ಸಂಪತ್ತು.

ಈಗ ಆಳ್ವಾರುಗಳು ತಮ್ಮ ದಿವ್ಯಪ್ರಬಂಧಗಳಲ್ಲಿ ವಿವರಿಸಿರುವ ನಾಯಿಕಾಭಾವದ ಪಾಶುರಗಳ ಸ್ವಾರಸ್ಯವನ್ನು ಪ್ರತಿಯೊಬ್ಬ ಆಳ್ವಾರ್‌ಗಳ ಪ್ರಬಂಧ ಗಳ ಅವಲೋಕನದ ಮೂಲಕ ಅರಿತು ಆನಂದಿ ಸೋಣ.

ಮೊದಲಿನ ಮೂವರು ಆಳ್ವಾರ್‌ಗಳದ್ದೇ ಒಂದು ಗುಂಪು. ಅವರನ್ನು ಒಟ್ಟಾಗಿಯೇ ಶ್ರೀ ವೈಷ್ಣವ ಸಾಹಿತ್ಯದಲ್ಲಿ ಅನುಭವಿಸುತ್ತಾರೆ. ಈ ಮೂವರೂ ತಲಾ ನೂರು ಪಾಶುರಗಳ ಮೂರು ತಿರುವಂದಾ ದಿಗಳನ್ನು ರಚಿಸಿರುತ್ತಾರೆ. ಈ ಮೂರು ನೂರು ಪಾಶುರಗಳ ಪೈಕಿ ಮೂರನೇ ಆಳ್ವಾರ್ ಎಂದು ಕರೆ ಯಲ್ಪಡುವ ಪೇಯಾಳ್ವಾರ್ ಅವರ 'ಮೂನ್ರಾಂ ತಿರುವಂದಾದಿ' ಯ ೬೯ ನೇ ಪಾಶುರದಲ್ಲಿ ಶ್ರೀ ವೈಷ್ಣವ ಸಾಹಿತ್ಯ ಪ್ರಪಂಚದಲ್ಲೇ ಮೊತ್ತಮೊದಲಿಗೆ ನಾಯಿಕಾಭಾವದ ಒಂದು ವಿರಹ ಚಿತ್ರ ಮನ ಕಲ ಕುವಂತೆ ಚಿತ್ರಿತವಾಗಿದೆ- ಆ ಪಾಶುರ ಇಂತಿದೆ.

ವೆರ್ಪೆನ್ರು ವೇಂಗಡಂ ಪಾಡುಂ
ವಿಯನ್ ತುಳಾಯ್
ಕರ್ಪೆನ್ರು ಶೂಡುಂ ಕರುಂ ಕುಳಿಲ್
ಮೇಲ್ - ಮೇಲ್ ಪ್ಪೋನ್ರ
ನೀಂಡ ತೋಳ್ ಮಾಲ್ ಕಿಡಂದ
ನೀಳ್ ಕಡಲ್ ನೀರಾಡುವಾನ್
ಪೂಂಡ ನಾಳೆಲ್ಲಾಂ ಪುಹುಂ

ಇಲ್ಲಿ ನಾಯಕಿಯ ತಾಯಿಯು ತನ್ನ ಮಗಳು ಪರಮಾತ್ಮನ ವಿಶ್ಲೇಷೆಯಿಂದ ಪಡುತ್ತಿರುವ ಬಾಧೆ ಯನ್ನು ಆಪ್ತರ ಮುಂದೆ ಹೇಳುತ್ತಾ ದುಃಖಪಡುವು ದರ ಚಿತ್ರಣವನ್ನು ನಾವು ಕಾಣುತ್ತೇವೆ.

ನನ್ನ ಮಗಳು ಬೆಟ್ಟವೆಂದು ವೇಂಕಟಾದ್ರಿಯನ್ನು ಹಾಡುತ್ತಾಳೆ; ತನ್ನ ಕಪ್ಪಾದ ಕೂದಲಿನ ಮೇಲೆ ವಿಲ ಕ್ಷಣವಾದ ತುಳಸಿಯನ್ನು ಕುಲಮರ್ಯಾದೆಗೆ ತಕ್ಕ ದೆಂದು ಮುಡಿದುಕೊಳ್ಳುತ್ತಾಳೆ. ಮಲ್ಲನನ್ನು ವಧಿ ಸಿದ ದೀರ್ಘವಾದ ಬಾಹುಗಳನ್ನುಳ್ಳ ಸರ್ವೇಶ್ವರನು ಪವಡಿಸಿದ ವಿಶಾಲವಾದ ಕ್ಷೀರಾಬ್ಧಿಯಲ್ಲಿ ಸ್ನಾನ ಮಾಡಲು ಸೂರ್ಯೋದಯ ವಾದಂತೆಲ್ಲಾ ದಿನ ವಹಿ ಧ್ಯಾನಿಸುತ್ತಿರುತ್ತಾಳೆ.

ಇಲ್ಲಿ ಬೆಟ್ಟವೆಂದು ಯಾರಾದರೂ ಆಕಸ್ಮಾತ್ ಸಂಭಾಷಣೆಯ ಮಧ್ಯೆ ಹೇಳಿಬಿಟ್ಟರೆ, ಅದನ್ನು ಈಕೆ

ಕೇಳಿಸಿಕೊಂಡು, ತನಗೆ ತಿಳಿದಿರುವ ಏಕೈಕ ದೆಟ್ಟವಾದ ವೇಂಕಟಾದ್ರಿಯನ್ನೇ ಕುರಿತು ಮಾತನಾಡುತ್ತಿರುತ್ತಾಳಂತೆ. ಅದರ ಮೇಲಿನ ಸ್ವಾಮಿಯಿಂದ ತಾನೇ ಆಕೆಗೆ ವಿಶ್ಲೇಷೆಯೇರ್ಪಟ್ಟಿರುವುದು. ಇನ್ನು ಅವನ ಪ್ರಸಾದವಾದ ತುಳಸಿಯನ್ನೇ ಆಕೆ ಮುಡಿಯಲು ಅಪೇಕ್ಷಿಸುವುದು. ಇಲ್ಲಿ ಒಂದು ಸ್ವಾರಸ್ಯ. ಪೆರಿಯಾಳ್ವಾರ್ ಭಕ್ತಾದಿಗಳು ಪರಮಾತ್ಮನು ತಾನು ಸೂಡಿ ಕಳೆದ ಪದಾರ್ಥಗಳನ್ನು ಹೊಂದಲು ಅಪೇಕ್ಷೆ ಪಡುವುದನ್ನು ತಿರುಪ್ಪಲ್ಲಾಂಡಿನಲ್ಲಿ ವಿವರಿಸುತ್ತಾ "ಉಡುತ್ತು ಕಳೈಂದ ನಿನ್ ಪೀದಹವಾಡೈ ಉಡುತ್ತು ಕಲೈತ್ತದುಂಡು; ತೊಡತ್ತ ತುಳಾಯಿಮಲರ್ ಶೂಡಿಕ್ಕಳೈಂದನ ಕುಂಡಿಮಿತ್ತೊಂಡರ್ಗಳೋಂ" ಎನ್ನುತ್ತಾರೆ. ದೈವ ಉಟ್ಟ ಪೀತಾಂಬರವನ್ನು ಶೇಷವಸ್ತ್ರವೆಂದು ಪ್ರಸಾದವಾಗಿ ಭಕ್ತರು ಸ್ವೀಕರಿಸುವರಂತೆ! ಅವನು ಧರಿಸಿ ಕಳೆದ ತುಳಸಿಯನ್ನು ಭಕ್ತಿಯಿಂದ ಸ್ವೀಕರಿಸಿ ತೊಟ್ಟುಕೊಳ್ಳುವ ಭಕ್ತರು ತಾವೆನ್ನುತ್ತಾರೆ. ಇದನ್ನೇ ಈಶಾವಾಸ್ಯದಲ್ಲಿ "ತೇನ ತ್ಯಕ್ತೇನ ಭುಂಜೀಥಾ" ಎಂದು ಹೇಳಿರುವುದು. ಇದೊಂದು ಭಕ್ತಿಯೋಗದ ಸಾಧನೆ. ಇದನ್ನು ಇಲ್ಲಿ ನಾಯಿಕಾಭಾವದ ಒಂದು ಲಕ್ಷಣವಾಗಿ ಧ್ವನಿಸಲಾಗಿದೆ. ಪರಮಾತ್ಮನು ಪವಡಿಸಿದ ಕ್ಷೀರಾಬ್ಧಿಯು ಮೆಚ್ಚಿನ ಸ್ಥಳ. ತಾನು ಅಲ್ಲಿ ಸ್ನಾನ ಮಾಡಿದರೋ ಆತನಿಗೆ ಸಂತೋಷವೇರ್ಪಟ್ಟು ಅಕಸ್ಮಾತ್ ಅದರಿಂದಲಾದರೂ ಸ್ವೀಕರಿಸುತ್ತಾನೆಯೋ ಎಂಬ ಹಂಬಲ.

ಒಟ್ಟಿನಲ್ಲಿ ನಾಯಕಿಯು ಪರಮಾತ್ಮನಿಗೆ ಆಪ್ತಳಾಗಲು ಅವನು ಇಷ್ಟಪಡುವ ಪದಾರ್ಥಗಳನ್ನು ಬಳಸುವುದರ ಮೂಲಕ ವಿಶ್ವಾಸವೇರ್ಪಡಿಸಿಕೊಳ್ಳಲು ಪ್ರಯತ್ನಿಸುತ್ತಾಳೆ.

ಇಲ್ಲಿ ಇನ್ನೊಂದು ಸ್ವಾರಸ್ಯ. ತುಳಸಿಯು ಅವನ ಸ್ಪರ್ಶ ಹೊಂದಿರುವುದರಿಂದ ಅದು ತನ್ನ ದೇಹಕ್ಕೆ ಸೋಂಕಿದರೆ ಆತನ ಸಂಸರ್ಗ ದೊರೆತಷ್ಟು ತಣ್ಣು ಏರ್ಪಡುವುದೋ ಎಂಬ ಭಾವವೂ ಅಡಗಿದೆ ಎನ್ನಬೇಕು. ಕ್ಷೀರಾಬ್ಧಿಯ ವಿಚಾರವೂ ಹೀಗೆಯೇ. ಅವನ ಮೆಯ್ ಸೋಂಕಿನ ಪ್ರಭಾವವನ್ನುಳ್ಳ ಆ ಕ್ಷೀರದಲ್ಲಿ ಸ್ನಾನ ಮಾಡುವುದರಿಂದ ಮೈಗೂ ಮನಸ್ಸಿಗೂ ತಂಪು ಉಂಟಾಗುತ್ತದೆಯೋ ಎಂಬ ಆಕೆಯ ತಪಸ್ಸೆ ಇಲ್ಲಿ ವ್ಯಕ್ತವಾಗುತ್ತೆ ಎಂದಾಗ ನಾಯಕಿ ಬರಿಯ ವಿರಹದ ಉನ್ಮಾದದಿಂದ ವಿಕಳ ಗಾತ್ರೆಯಾಗಿಲ್ಲ ಅವಳಲ್ಲಿ ವಿವೇಕದ ಆಧಿಕ್ಯವೂ ಇದೆ ಎಂಬುದನ್ನು ನಾವು ಗಮನಿಸಬಹುದು. ಆಂಡಾಳ್ ನ ನಾಚ್ಚಿಯಾರ್ ತಿರುಮೊಳಿಯಲ್ಲಿ ವಿರಹದ ದೇಗೆಯಿಂದ ತಪಿಸುವ ತನ್ನ ಮೇಲೆ ನಾಯಕನಾದ ಪರಮಾತ್ಮನು ಧರಿಸಿದ ಬಟ್ಟೆಯನ್ನು (ಪೀತಾಂಬರವನ್ನು) ಹಾಕಿರಿ; ಅವನು ತೊಟ್ಟ ತುಳಸಿಯನ್ನು ಧಾರಣೆ ಮಾಡಿಕೊಳ್ಳಲು ತನ್ನಿರಿ, ಅವನು ಹಾಕಿಕೊಂಡಿದ್ದ ವನಮಾಲೆಯನ್ನು ತನ್ನ ಎದೆಯ ಮೇಲೆ ಹಾಕಿರಿ; ಆ ದೇವನ ಬಾಯಲ್ಲಿ ಊರಿದ ನೀರನ್ನು ಮೇಲೆ ಎರಚಿರಿ; ಅವನು ಊದಿದ ಕೊಳಲಿನಲ್ಲಿ ಹನಿದಿರುವ ನೀರನ್ನು ತನ್ನ ದೇಹಕ್ಕೆ ಸವರಿ; ಅವನು ನಡೆದ ಹಾದಿಯ ಹುಡಿಮಣ್ಣನ್ನು ತನ್ನ ದೇಹದ ಮೇಲೆ ಎರಚಿರಿ; ಅವನು ಉಪಯೋಗಿಸಿದ ಕೋಲನ್ನು ತನ್ನ ದೇಹಕ್ಕೆ ಅಮುಕಿ ಕಟ್ಟಿರಿ; ಅದರಿಂದಲಾದರೂ ವಿರಹದಿಂದ ಉರಿಯುವ ದೇಹವು ತಣ್ಣಗೆ ಆಗುತ್ತದೆ. ಹೋಗುತ್ತಿರುವ ಉಸಿರು ಉಳಿಯುತ್ತದೆ— ಎಂಬುದಾಗಿ ಹಲವು ರೀತಿ ಹಂಬಲಿಸುವುದನ್ನು ಇಲ್ಲಿ ನೆನೆಯಬಹುದು.

ಇವು ಪರಮಾತ್ಮನ ಒಲವು ಸಂಪಾದಿಸಿಕೊಳ್ಳಲು ಜೀವರು ಮಾಡುವ ಸಾಧನೆ, ಈ ಭಾವವನ್ನು ವ್ಯಕ್ತಪಡಿಸಿದ ಆಳ್ವಾರ್ - ಆಳ್ವಾರ್‌ಗಳು ನಿಜಕ್ಕೂ ಧನ್ಯ ಜೀವಿಗಳು.

ಇನ್ನು ತಿರುಮಳಿಶೈ ಆಳ್ವಾರ್ ಅವರ ನಾನ್‌ಮುಗನ್ ತಿರುವಂದಾದಿಯ ೩೯ ನೇ ಪಾಶುರದಲ್ಲಿ ಈ ಅನುಭಾವದ ಮತ್ತೊಂದು ಮುಖವನ್ನು ನಾವು ತಿಳಿಯಬಹುದು.

ಅಳ್ಕೈಪ್ಪನ್ ತಿರುವೇಂಗಡತ್ತಾನ್ಯೆ ಕಾಣ
ಇಳ್ಕೈಪ್ಪನ್ ತಿರುಕ್ಕೂಡಲ್ ಕೂಡ -
ಮಳ್ಕೈಪ್ಪೇರ್
ಅರುವಿ ಮಣಿ ವರಂದಿ ವಂದು ಇಳಿಯ ಆನ್ಯೆ
ವೆರುವಿ ಅರವು ಒಡುಂಗುಂ ವೆರ್ಪು

ಶ್ರೀ ವೆಂಕಟಾಚಲಪತಿಯನ್ನು ಕಣ್ಣಿನಿಂದ ಕಂಡು ಸೇವಿಸಲು ಬಾಯಿಬಿಟ್ಟು ಕೂಗುತ್ತಿದ್ದೇನೆ. ಅಧಿಕವಾದ ವರ್ಷದ ದೆಸೆಯಿಂದ ಪ್ರವಹಿಸುವ ಜಲಪಾತ, ಕಾಲುವೆಗಳು ರತ್ನಗಳನ್ನು ಉರುಳಿಸಿಕೊಂಡು ಬಂದು ಬೀಳಲು ಆನೆಯು ಅದನ್ನು ಕಂಡು ಭಯಪಟ್ಟು ಹೋಗುವಂತಹುದೂ, ಸರ್ಪವು ಮಿಂಚೆಂದು ತಿಳಿದು ಹೆದರಿ ಹುತ್ತದೊಳಗಡೆ ಅಡಗುವ ವ್ಯಾಪಾರವುಳ್ಳ ಪರ್ವತವನ್ನು ಸೇರಲಿಚ್ಚಿಸಿ ಕೂಡಲನ್ನು ಬರೆದು ಅದು ಕೂಡುವುದೋ ಎಂದು ನೋಡುತ್ತಿದ್ದೇನೆ ಎಂಬುದಾಗಿ ನಾಯಕಿಯು ತನ್ನ ವಿರಹಾತುರವನ್ನು ಬಿನ್ನವಿಸಿಕೊಳ್ಳುತ್ತಾಳೆ.

ಇಲ್ಲಿ ನಾಯಕಿಯೇ ತನ್ನ ಅಳಲನ್ನು ಹೊರಸೂಸುವುದು ಮತ್ತು ಕೂಡಲ್ ಎಂಬ ಶಕುನ ಶಾಸ್ತ್ರವನ್ನು ತನ್ನ ವಿರಹವು ಕೊನೆಗಾಣುವುದೋ ಎಂದು ಪರೀಕ್ಷಿಸಲು ಬಳಸಿ ನೋಡುವ ಒಂದು ಪ್ರಯೋಗ ಈ ಕೂಡಲ್ ಎನ್ನುವ ವಿಧಾನ ನೆಲದ ಮೇಲೆ ಚಿತ್ರವನ್ನು ರಚಿಸುವುದು ಇದನ್ನು ರಂಗವಲ್ಲಿಯಿಂದ ಇಡುತ್ತಾರೆ. ಇದರಲ್ಲಿ ವೃತ್ತಾಕಾರದ ಚಕ್ರಗಳನ್ನು ಬರೆಯುತ್ತಾರೆ. ಅವುಗಳನ್ನು ಕೂಡುವಂತೆ ಪ್ರಯತ್ನಿಸಿ ಅವು ಕೂಡಿದರೆ ತಮ್ಮ ಕಾರ್ಯ ಕೈಗೂಡುವುದಾಗಿ ಭಾವಿಸುತ್ತಾರೆ. ಇದನ್ನೇ ಆಂಡಾಳ್ ನಾಚ್ಚಿಯಾರ್ ತಿರುಮೊಳಿಯ ಒಂದು ದಶಕದಲ್ಲಿ ವಿವರಿಸುತ್ತಾಳೆ. ಇದರ ಮೊದಲ ಪಾಶುರ ಇಂತಿದೆ—

ತೆಳ್ಳಿಯಾರ್ ಪಲರ್ ಕೈತೊಳುಸ್ದೇವನಾರ್
ವಳ್ಳಲ್ ಮಾಲಿರುಂ ಶೋಲೈ ಮಣಾಳನಾರ್
ಪಳ್ಳಿಕೊಳ್ಳುಮಿಡತ್ತು ಅಡಿಕೊಟ್ಟಿಡ
ಕೊಳ್ಳು ಮಾಹಿಲ್ ನೀ ಕೂಡಿಡು ಕೂಡಲೇ

ಇಲ್ಲಿ ಈ ಕೂಡಲಿನ ವಿವರಣೆ ಸ್ವಲ್ಪ ವಿಸ್ತಾರವಿದೆ. ಇನ್ನು ಕೆಲವು ಆಳ್ವಾರ್ ಪಾಶುರಗಳಲ್ಲಿ ಈ ಕೂಡಲಿನ ಚಿತ್ರ ಕಂಡುಬರುತ್ತದೆ. ಅಂತೂ ವಿರಹದೆಶೆಯನ್ನು ಕಾಣಿಸುವ ಒಂದು ಬಗೆ ಇದು. ತಮಿಳು ಭಾಷೆಯ ಕಾವ್ಯ ಲಕ್ಷಣಗಳಲ್ಲಿ ಇದೂ ಒಂದು. ಹೀಗೆ ತಿರುಮಳಿಶೈ ಆಳ್ವಾರ್ ತಮ್ಮೆರಡು ಪ್ರಬಂಧಗಳಲ್ಲಿ ಒಂದು ಪಾಶುರದಲ್ಲಿ ಮಾತ್ರ ಈ ನಾಯಿಕಾಭಾವವನ್ನು ವಿವರಿಸಿದ್ದಾರೆ. ಮುಂದಿನ ಎರಡು ಪಾಶುರಗಳು ಎಂದರೆ ೪೦-೪೧ ರಲ್ಲಿ ಒಬ್ಬ ವ್ಯಕ್ತಿಯು ಪರಮಾತ್ಮಲಾಭಕ್ಕಾಗಿ ಹಂಬಲಿಸುವ ವಿಚಾರ ಇದ್ದರೂ ಕೂಡ ಅದು ಒರ್ವ ನಾಯಕಿಯು ಪರಿತಪಿಸುವ ಚಿತ್ರಣವಾಗಿಲ್ಲ. ಒಬ್ಬ ಭಕ್ತನ ಗಂಭೀರ ಚಿಂತನೆಯಂತೆ ಕಂಡುಬರುವುದರಿಂದ ಅದು ನಾಯಿಕಾಭಾವದ ಚೌಕಟ್ಟಿನಲ್ಲಿ ವರ್ಗೀಕೃತ ವಾಗುವುದಿಲ್ಲ. ತಿರುಮಳಿಶೈ ಆಳ್ವಾರ್ ಮೊದಲಾಳ್ವಾರ್ ಮೂವರ ಸಮಕಾಲೀನರಾಗಿರುವುದರಿಂದಲೂ ಅವರ ಪ್ರಬಂಧ ಸಾಹಿತ್ಯದ ರೀತಿ ಮೇಲಿನ ಆಳ್ವಾರ್‌ಗಳ ಪ್ರಬಂಧಗಳಂತೆಯೇ ಇರುವುದರಿಂದಲೂ ಈ ನಾಲ್ವರು ಆಳ್ವಾರ್ ಪ್ರಬಂಧಗಳನ್ನು ಒಟ್ಟಾಗಿ ಅಧ್ಯಯನ ಮಾಡಲಾಗಿದೆ.

ಪ್ರಾಯಶಃ ಆಗತಾನೇ ಆಳ್ವಾರ್ ದಿವ್ಯಪ್ರಬಂಧಗಳ ಉಗಮವಾಗುತ್ತಿದ್ದುದರಿಂದಲೋ ಏನೋ ಈ ನಾಯಿಕಾಭಾವ ಅಲ್ಲಲ್ಲಿ ಮಿಂಚಿದೆಯೇ ವಿನಹ ಅಷ್ಟೊಂದು ದಟ್ಟವಾಗಿ ಪ್ರಬಂಧಗಳಲ್ಲಿ ಹೊಕ್ಕಿರಲಿಲ್ಲ ಎಂಬುವುದು ಸುವ್ಯಕ್ತವಾಗುತ್ತದೆ. ಅಥವಾ ಭಕ್ತಿ ಸಾಹಿತ್ಯದೊಳಗೆ ಈ ಭಾವವನ್ನು ಹೊಗಿಸಲು ಇನ್ನೂ ಹಿಂತೆಗೆಯುತ್ತಿದ್ದರೋ ಏನೋ ಎಂಬುವುದೂ ವಿವಾದಾಸ್ಪದ. ಉನ್ನತದ ವಿಚಾರದ ಮಧ್ಯೆ ಅಶ್ಲೀಲವೆಂದು ಕರೆಯಬಹುದಾದ ಶೃಂಗಾರ ಪ್ರಕಾರವನ್ನು ಹಾಕಿದರೆ ಗೌರವ ಘಟತ್ತೆ, ಪರಮಾತ್ಮನ ಭಕ್ತಿ ಇವುಗಳಿಗೆ ಸ್ವಲ್ಪ ಕುಂದಾಗಬಹುದೋ ಎಂಬ ಹೆದರಿಕೆ ಇದ್ದರೂ ಇರಬಹುದು. ಆದರೆ ಇದೆಲ್ಲಾ ನಮ್ಮ ಕಲ್ಪನೆ ಇದ್ದರೂ ಇರಬಹುದು.

—ಶ್ರೀಕೃಷ್ಣಾರ್ಪಣಮಸ್ತು— ★

# ಧಾರ್ಮಿಕತೆಯ ರಸಕವಳ

— ಎಚ್.ಕೆ. ರಾಘವೇಂದ್ರರಾವ್.

## ಶುಭತಾಂಬೂಲ

(ದಿ|| ಬ. ನ. ಗುಂಡೂರಾಯರ ಲೇಖನಗಳ ಸಂಗ್ರಹ)

ಸಂ : ರಘುಸುತ

ಬ.ನ. ಗುಂಡೂರಾಯರ ಸ್ಮಾರಕ ಗ್ರಂಥ ಮಾಲೆ
ಸಾಧುಮಠ, ಸಾಧುಬಾವಿ ರಸ್ತೆ,
ಚಿಕ್ಕಬಳ್ಳಾಪುರ - 562 101

ಬೆಲೆ : ರೂ. 28/-, ಪುಟಗಳು : 162

ಭಾರತೀಯ ಸಾಹಿತ್ಯದಲ್ಲಿ ಆಧ್ಯಾತ್ಮಿಕ ಮತ್ತು ಭಕ್ತಿ ಸಾಹಿತ್ಯದ ಕೃಷಿಯನ್ನು ಮಾಡಿದವರು ಅಪಾರ. ಆದರೆ ಕಾಲಚಕ್ರ ತಿರುಗಿದಂತೆ ಸಾಹಿತ್ಯ ಕ್ಷೇತ್ರ ಕಾಣುತ್ತಿರುವ ಪರಿವರ್ತನೆಯ ಯುಗದಲ್ಲಿ ಈ ಬಗೆಯ ಕೃತಿಗಳು ಬೆಳಕು ಕಾಣುತ್ತಿರುವುದು ತೀರಾ ವಿರಳವಾಗಿವೆ. ಕೋಲಾರ ಜಿಲ್ಲೆಯಂತಹ ಕನ್ನಡ - ತೆಲುಗು ಭಾಷಾಮಿಶ್ರಣದ ತಾಣದಲ್ಲಿ ಈ ಎರಡೂ ಭಾಷೆಗಳೊಂದಿಗೆ ಸಂಸ್ಕೃತದ ಸೊಗಡಿನ ರುಚಿಯನ್ನು ಅರಿತು ಸೊಗಸಾದ ಆಧ್ಯಾತ್ಮಿಕ ಎನ್ನುವುದಕ್ಕಿಂತಲೂ ಹೆಚ್ಚಾಗಿ ಧಾರ್ಮಿಕ ಸಾಹಿತ್ಯವನ್ನು ವಿಪುಲವಾಗಿ ಸೃಷ್ಟಿಸಿದ್ದವರು ಕೀರ್ತಿಶೇಷ ಬ. ನ. ಗುಂಡೂರಾಯರು.

ರಸ್ತೆ ಅಪಘಾತವೊಂದರಲ್ಲಿ ಅಕಾಲ ಮರಣಕ್ಕೀಡಾದ ಗುಂಡೂರಾಯರು ವಿವಿಧ ಪತ್ರಿಕೆಗಳಲ್ಲಿ ಬರೆದಿದ್ದ ಬರಹಗಳ ಸಂಕಲನ ರೂಪವೇ 'ಶುಭತಾಂಬೂಲ'. ಕನ್ನಡ - ತೆಲುಗು - ಸಂಸ್ಕೃತ ಭಾಷೆಗಳ ಮೇಲೆ ತಾವು ಹೊಂದಿದ್ದ ಅಸದೃಶ ಹಿಡಿತ ಮತ್ತು ತಮ್ಮದೇ ಆದ ಚಕಿತಗೊಳಿಸುವ ಶೈಲಿಯ ಕಾರಣದಿಂದಾಗಿ ಶ್ರೀಯುತರ ಪ್ರತಿ ಲೇಖನದಲ್ಲೂ ಸ್ವಾದಿಷ್ಟಪೂರ್ಣತೆ ಅಡಕವಾಗಿರುತ್ತಿದ್ದಿತು. ಅವರ ಸ್ಮರಣೆಯಲ್ಲಿ ಕೆಲವು ಮಿತ್ರರು, ಸಾಹಿತ್ಯಾಸಕ್ತರು ರೂಪಿಸಿಕೊಂಡಿರುವ ಯೋಜನೆಯ ಫಲವಾಗಿ (ಶುಭತಾಂಬೂಲ) ಕನ್ನಡ ಸಾರಸ್ವತಲೋಕದ ಮಡಿಲು ಸೇರಿದೆ.

ಈ ಸಂಕಲನದಲ್ಲಿ ಸೇರ್ಪಡೆಯಾಗಿರುವ ೨೮ ಲೇಖನಗಳಲ್ಲಿ ಬಹುಪಾಲು ನಮಗೆ ಚಿರಪರಿಚಿತವಾದ ರಾಮಾಯಣ, ಮಹಾಭಾರತ ಮತ್ತು ಪುರಾಣಗಳಲ್ಲಿ ಅಂತರ್ಗತವಾದವು, ಆದರೆ ಅವುಗಳಿಗೆ ಬ. ನ. ಗುಂ. ನೀಡಿರುವ 'ಮಾಂತ್ರಿಕಸ್ಪರ್ಶ'ದಿಂದಾಗಿ ಹೊಸತನದಿಂದ ರಾರಾಜಿಸುತ್ತಿವೆ. ಆಧ್ಯಾತ್ಮ ಅನುಭಾವ ಹಾಗೂ ವೇದಾಂತ ಸಾಹಿತ್ಯದಲ್ಲಿ ಸಾಮಾನ್ಯವಾಗಿರುವಂತಹ ಸಂಕೀರ್ಣತೆಯಿಂದ ಮುಕ್ತವಾಗಿರುವುದು ಮತ್ತು ಸರಳ ಪದಪ್ರಯೋಗಗಳಿಂದ ಈ ಕೃತಿ ಓದುಗರ ಗಮನ ಸೆಳೆಯುತ್ತದೆ.

ಪುಸ್ತಕಕ್ಕೊಂದು ಅರ್ಥಪೂರ್ಣ ಶೀರ್ಷಿಕೆಯನ್ನು ನೀಡಿರುವ 'ಶುಭತಾಂಬೂಲ' ದಿಂದ ಹಿಡಿದು ಹೆಸರು ಗೊತ್ತಿದ್ದರೂ ಅದರ ವಿವರಣೆ ತಿಳಿಯದೆ ಪರಿತಪಿಸುವವರಿಗೆ ನೆರವಾಗುವಂತಹ 'ಕೆಲವು ನ್ಯಾಯಗಳು' ವರೆಗೆ ಸುಮಾರು ನೂರೈವತ್ತು ಪುಟಗಳುದ್ದಕ್ಕೂ ಹರಿದು ಬಂದಿರುವುದು ಸರಸ, ವೈಚಾರಿಕ ಭಕ್ತಿಯ ರಸಗಂಗೆ. ಕೈವಾರ ತಾತಯ್ಯನವರಂತಹ ಅನುಭಾವ ಸಾಹಿತ್ಯದ ಮಹತ್ತರ ವ್ಯಕ್ತಿಯ ರಚನೆಗಳ ಪರಿಚಯ ಮಾಡಿಕೊಟ್ಟಿರುವ ರಾಯರು ನಂತರದ ಬರಹಗಳಲ್ಲಿ ಆರಿಸಿಕೊಂಡಿರುವುದು ಒಂದು ಬಗೆಯ ಕುತೂಹಲ ಭರಿತವಾದ ಬರವಣಿಗೆಯ ಶೈಲಿಯನ್ನು.

ಆರಂಭದಿಂದ ಕೊನೆಯವರೆಗೂ ಸಂಗತಿಗಳನ್ನು ಹೆಣೆದುಕೊಂಡು ಹೋಗಿ ಅಂತ್ಯದಲ್ಲಿ ಒಂದೇ ಒಂದು ಚಿಕ್ಕ ಪ್ಯಾರಾದ ಸಹಾಯದಿಂದ ಅದಕ್ಕೆ ಮಂಗಳವನ್ನು ಕಲ್ಪಿಸುವ ಈ ವೈಖರಿಗೆ 'ನಾನು ಮತ್ತು ಪಾರ್ಶ್ವವಾಯು' ಹಾಗೂ 'ಕೃಪಾಗಂಗೆ' ಉತ್ತಮ ನಿದರ್ಶನವಾಗಿ ನಿಲ್ಲಬಲ್ಲವು.

ಭಾರತೀಯ ದಾರ್ಶನಿಕಶಾಸ್ತ್ರ ಮತ್ತು ಪರಂಪರಾಗತವಾಗಿ ಭಾರತದ ಇತಿಹಾಸದಲ್ಲಿ ಸಾಗಿ ಬಂದಿರುವ ವಿದ್ಯಮಾನಗಳಿಗೆ ಕೈಗನ್ನಡಿ ಹಿಡಿಯುವಂತಹ ಅನೇಕ ಬರಹಗಳಿಂದ 'ಶುಭತಾಂಬೂಲ' ಇನ್ನಷ್ಟು ರುಚಿಕರವಾಗಿದೆ. ಪ್ರಾಚೀನ ಭಾರತದಲ್ಲಿ ಚಿಕಿತ್ಸಾಲಯಗಳು, ಯೋಗ ಹಾಗೂ ಕುಂಡಲಿನಿ, ಶ್ರೀಹರಿಚರಿತೆ, ಶ್ರೀ ಲಲಿತಾ ತ್ರಿಶತಿ ಸ್ತೋತ್ರ, ಸೌಂದರ್ಯಲಹರಿ, ಪರಮಹಂಸ ಚರಿತೆ, ಅಷ್ಟಾವಧಾನ, ಪ್ರಾಚೀನ ನ್ಯಾಯಶಾಸ್ತ್ರಗಳು ಇವುಗಳು ಜಿಜ್ಞಾಸುಗಳಿಗೆ ಉತ್ತಮ ಮಾರ್ಗದರ್ಶನವನ್ನು ನೀಡಬಲ್ಲವು. ಈಗಿನ ಪೀಳಿಗೆಗೆ ಅರ್ಥವಾಗುವಂತೆ ಅಲ್ಲಲ್ಲಿ ಆಂಗ್ಲ ಭಾಷಾರ್ಥವನ್ನು ನೀಡಿರುವುದು ವಾಚನದ ಓಟಕ್ಕೆ ಧಕ್ಕೆಯನ್ನೇನೂ ಉಂಟುಮಾಡಿಲ್ಲ.

ಬಾಳಿನ ಕೊನೆಯವರೆಗೂ 'ಚಲಿಸುವ ವಿಶ್ವಕೋಶ'ದಂತಿದ್ದ ಶ್ರೀಯುತರ ಸಾಹಿತ್ಯ ಪ್ರತಿಭೆಯನ್ನು ಕನ್ನಡಿಗರ ನೆನಪಿನಲ್ಲುಳಿಸುವ ಸಲುವಾಗಿ ಬ. ನ. ಗುಂಡೂರಾವ್ ಸ್ಮಾರಕ ಗ್ರಂಥಮಾಲೆಯು ಹಮ್ಮಿಕೊಂಡಿರುವ ಅರ್ಥಪೂರ್ಣ ಕಾರ್ಯಕ್ರಮದ ಮೊದಲ ಕುಸುಮವಾಗಿ ಹೊರಬಂದಿರುವ 'ಶುಭತಾಂಬೂಲ', ಮೂಲ ಸೌಂದರ್ಯಕ್ಕೆ ಚ್ಯುತಿತಾರದ ಅನುವಾದ, ಚಿಕ್ಕಪುಟ್ಟ ವಾಕ್ಯಗಳ ಮೂಲಕ ಕಥಾಪ್ರಸಂಗಗಳನ್ನು ವರ್ಣಿಸುವ ಸರಳಶೈಲಿಯನ್ನು ಮೇಳೈಸಿಕೊಂಡು ಸವಿತಾಂಬೂಲವಾಗಿದೆ.

ತಿರುಮಲ ತಿರುಪತಿ ದೇವಸ್ಥಾನಗಳ ಟ್ರಸ್ಟಿನವರ 'ಸಪ್ತಗಿರಿ' ಮಾಸಪತ್ರಿಕೆಯ ಕನ್ನಡ ಆವೃತ್ತಿಯಲ್ಲಿ ಈ ಕೃತಿಯಲ್ಲಿನ ಬಹಳಷ್ಟು ಬರಹಗಳು ಪ್ರಕಟವಾಗಿದ್ದವಾದರೂ ಈ ಬಗ್ಗೆ ಪ್ರಸ್ತಾಪ ಮಾಡದಿರುವುದೊಂದು ಎದ್ದು ಕಾಣಿಸುವಂತಹ ಲೋಪ. ಬ. ನ. ಗುಂ. ಸ್ಮಾರಕ ಗ್ರಂಥ ಮಾಲೆಯ ಮುಂದಿನ ಕುಸುಮಗಳಲ್ಲಾದರೂ ಮೂಲ ಆಕರವನ್ನು ಸ್ಮರಿಸುವಂತಹ ಕ್ರಿಯೆ ಆಗದೇಕಾದ್ದು ಅವಶ್ಯಕ ಅಥವಾ ಈ ಪುಸ್ತಕದ್ದೇ ಮರುಮುದ್ರಣದಲ್ಲಿಯಾದರೂ (ಪುಸ್ತಕದ ಪ್ರತಿಗಳು ಬೇಗನೆ ವಾಚಕರ ಕೈಸೇರಿ ಅದರ ಬೇಡಿಕೆ ಹೆಚ್ಚಾಗಲಿ ಎಂಬ ಹಾರೈಕೆಯೂ ಇಲ್ಲಿ ಧ್ವನಿಸದೇ) ಈ ಲೋಪವನ್ನು ಪೂರೈಸುವಂತಾಗಲಿ ಎಂದು ಹಾರೈಸುವೆ. *

## ಪ್ರಕಟನೆ :

ತಿರುಮಲೆಗೆ ಹೋಗುವ ಘಾಟ್‌ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

ತಿ. ತಿ. ದೇ.

# ಹರಿದಾಸರ ಹಿರಿಮೆ

---ಡಾ|| ಗುರುರಾಜಾಚಾರ್ಯ ಗುಡಿ.

ಶತ ಶತಮಾನಗಳಿಂದ ಹರಿದು ಬರುತ್ತಿರುವ ಹರಿದಾಸಸಾಹಿತ್ಯ ನಾಡಿನ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸಿದಂತೆ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಶ್ರೇಯಸ್ಸನ್ನು ತನ್ನದಾಗಿಸಿಕೊಂಡಿದೆ. ಸಾಮಾಜಿಕ, ಧಾರ್ಮಿಕ, ಸಾಹಿತ್ಯಕ ಹಾಗೂ ಸಂಗೀತ ಮುಂತಾದ ಕ್ಷೇತ್ರಗಳಿಗೆ ಒಟ್ಟು ಕರ್ನಾಟಕ ಸಂಸ್ಕೃತಿಗೆ ದಾಸಸಾಹಿತ್ಯದ ಕೊಡುಗೆ ಅಮೂಲ್ಯವಾಗಿದೆ.

ಕನ್ನಡನಾಡಿನ ಹಳ್ಳಿಹಳ್ಳಿಗಳಲ್ಲಿ, ವಿವಿಧ ಜನಸಮೂಹದಲ್ಲಿ ಇಂದು ನಮಗೆ ಕೇಳಿಬರುವುದು ಪಂಪರನ್ನರಂಥವರ ಮಹಾಕಾವ್ಯಗಳಲ್ಲ. ದಾಸರ 'ದೇವರನಾಮಗಳು'. ಹಬ್ಬ ಹರಿದಿನಗಳಂತಹ ವಿವಿಧ ಶುಭ ಪ್ರಸಂಗಗಳಂತೆ ಕೆಲವೆಡೆ ನಿಯಮಿತವಾಗಿಯೂ ಈ ಕೀರ್ತನೆಗಳು ಕೇಳಿಬರುತ್ತವೆ. ಮಾತ್ರವಲ್ಲ ದೊಡ್ಡ ದೊಡ್ಡ ಸಂಗೀತ ಕಚೇರಿ ಕಾರ್ಯಕ್ರಮಗಳೂ ಸಹ 'ದೇವರನಾಮ' ಗಳಿಲ್ಲದೆ ಮುಕ್ತಾಯಗೊಳ್ಳದಿರುವುದು ಕೀರ್ತನೆಗಳ ಜನಪ್ರಿಯತೆಗೆ ಕೈಗನ್ನಡಿ. ಹೀಗೆ ಕೀರ್ತನಸಾಹಿತ್ಯ ಕನ್ನಡ ಜನಜೀವನದಲ್ಲಿ ಹಾಸುಹೊಕ್ಕಾಗಿ ಜನರ ನಾಲಿಗೆಯ ಮೇಲೆ ನಲಿದಾಡುವ ಸಾಹಿತ್ಯವಾಗಿದೆ.

ಭಕ್ತಿ ಪಂಥದ ಇತಿಹಾಸದಲ್ಲಿ ಭದ್ರವಾದ ಸ್ಥಾನ ನಿರ್ಮಿಸಿಕೊಂಡು ಸುದೀರ್ಘವಾಗಿ ಹರಿದು ಬರುತ್ತಿರುವ ಹರಿದಾಸ ಪರಂಪರೆಯ ಚೇತನ ದ್ವೈತ ದರ್ಶನ. ಹರಿದಾಸರ ಗುರು ಆನಂದತೀರ್ಥರು ಬೋಧಿಸಿದ 'ಹರಿಸರ್ವೋತ್ತಮತ್ವ' ಹರಿದಾಸರ ತತ್ವ, ಅವರ ಉಪದೇಶವೇ ಹರಿದಾಸರ ಸಂದೇಶ. ದ್ವೈತಸಿದ್ಧಾಂತದ ಬೆಳಕಿನಲ್ಲಿ ಮುನ್ನಡೆದು ಭವ್ಯವಾಗಿ ಕಂಗೊಳಿಸುವ ಈ ದಾಸಸಾಹಿತ್ಯ ಸೌಧದ ಭದ್ರಬುನಾದಿ ದ್ವೈತ ಸಿದ್ಧಾಂತ.

ದ್ವೈತಸಿದ್ಧಾಂತದ ಎಲ್ಲ ಪ್ರಮೇಯಗಳೂ ಸಂಸ್ಕೃತದಲ್ಲಿಯೇ ಅಡಗಿಕೊಂಡುದರಿಂದ ಶ್ರೀ ಸಾಮಾನ್ಯನು ಕಡೆಗಣಿತನಾಗಿಯೇ ಉಳಿದನು. ದ್ವೈತದರ್ಶನದಲ್ಲಿ ಬಂಧಿತವಾಗಿದ್ದ ವೇದೋಪನಿಷತ್ತುಗಳ ಹರಿಭಕ್ತಿ ಗಂಗೆಯನ್ನು ಕನ್ನಡದಂಗಳದಲ್ಲಿ ಹರಿಸಿದವರು ದಾಸಕೂಟದ ಭಗೀರಥರು. ಇವರು ತಮ್ಮ ಕೀರ್ತನೆಗಳ ಮೂಲಕ ಮನೆ ಮನೆಗೂ ಭಕ್ತಿಯ ಕಂಪನ್ನು ಬೀರಿದರು. ವೇದೋಪನಿಷತ್ತುಗಳಲ್ಲಿ ತತ್ವಸಿದ್ಧಾಂತಗಳು ದ್ವೈತದರ್ಶನಾಚಾರ್ಯರಿಂದ ನಾರೀಕೇಲ ಪಾಕಗೊಂಡಿದ್ದರೆ, ಅವೇ ಹರಿದಾಸರಿಂದ ದ್ರಾಕ್ಷಾ ಪಾಕಗೊಂಡವು. ದ್ವೈತದರ್ಶನದ ಕೃತಿಗಳು ನೇರವಾದ ಸೂರ್ಯನ ಪ್ರಕಾಶದಂತೆ ಪ್ರಖರವಾದರೂ ಅದೇ ಸೂರ್ಯನ ಪ್ರಕಾಶ ಚಂದ್ರನ ಮೂಲಕ ಹರಿದು ತಂಪಾಗುವಂತೆ ಹರಿದಾಸರ ಮೂಲಕ ಹರಿದ ದ್ವೈತದರ್ಶನದ ವಿಚಾರಗಳೂ ಸಹ ಆಹ್ಲಾದಕರವಾಗಿವೆ.

ಸಂಸ್ಕೃತದ ಉಚ್ಚವಿದ್ವಾಂಸರು ಕನ್ನಡವನ್ನು ತುಚ್ಛವಾಗಿ ಕಾಣುತ್ತಿದ್ದ ದಿನಮಾನದಲ್ಲಿಯೇ ಕನ್ನಡದಲ್ಲಿ ಕೀರ್ತನೆ ರಚನೆ ಶ್ರೀಪಾದರಾಜರ ಒಂದು ದೊಡ್ಡ ಸಾಹಸ. ಮಾತ್ರವಲ್ಲ ಕೀರ್ತನಕಾರರ ತಂಡವನ್ನೇ ಸಂಘಟಿಸಿ ಕೀರ್ತನಪರಂಪರೆಯನ್ನೇ ಹುಟ್ಟುಹಾಕಿದ ಅಪೂರ್ವ ಶ್ರೇಯಸ್ಸು ಶ್ರೀಪಾದರಾಜರದೆ. ಮುಂದೆ ವ್ಯಾಸರಾಜರ ನೇತೃತ್ವದಲ್ಲಿ ರೂಪುಗೊಂಡ 'ದಾಸಕೂಟ' ಈ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿತು. ಈ ದಾಸಸಾಹಿತ್ಯ ಆಂದೋಲನದಲ್ಲಿ ರಚನಾತ್ಮಕವಾಗಿ ಕ್ರಿಯಾಶೀಲರಾದ ಶ್ರೀಪಾದರಾಜರು, ವ್ಯಾಸರಾಜರು ಹಾಗೂ ವಾದಿರಾಜರಂತಹ ಮಠಾಧಿಪತಿಗಳೇ ಆಗಿದ್ದು ಮುಂಚೂಣಿಯಲ್ಲಿದ್ದರು. ಜೊತೆಗೆ ಪುರಂದರದಾಸರು, ಕನಕದಾಸರು, ವಿಜಯದಾಸರು ಮುಂತಾದವರು ತಮ್ಮ ಸಮಸ್ತ ಬದುಕನ್ನೇ ದಾಸಸಾಹಿತ್ಯ ಸೇವೆಗೆ ಸಮರ್ಪಿಸಿ ಸವೆಸಿದರು. ಸಮಾಜದಲ್ಲಿ ಪ್ರಮುಖರೆನಿಸಿದ ಮಠಾಧಿಪತಿಗಳಂಥವರ ನೇತೃತ್ವ ಹಾಗೂ ಪುರಂದರದಾಸರು ಮತ್ತು ಕನಕದಾಸರಂಥವರ ಸಮರ್ಪಣ ಭಾವದ ಸತತ ತುಡಿತಗಳ ಪರಿಣಾಮವಾಗಿ ದಾಸಸಾಹಿತ್ಯ ವೈವಿಧ್ಯ ಹಾಗೂ ವೈಶಿಷ್ಟ್ಯಪೂರ್ಣ ವಾಯಿತಲ್ಲದೆ ಬಹುಬೇಗ ಜನಪ್ರಿಯವೂ ಆಯಿತು.

ಸಮಗ್ರ ಮಧ್ವಸಿದ್ಧಾಂತವನ್ನು ಸೂರೆಗೊಂಡ ಹರಿದಾಸರು ಹರಿಸರ್ವೋತ್ತಮತ್ವದಂತಹ ಕಠಿಣ ಪ್ರಮೇಯಗಳನ್ನೂ ಸಹ ತಮ್ಮ ಕೃತಿಗಳ ಮೂಲಕ ದ್ರವೀಕರಿಸಿ ಕೊಟ್ಟಿದ್ದಾರೆ. ಇದು ಶ್ರೀ ಸಾಮಾನ್ಯನಿಗೆ ತತ್ವಜ್ಞಾನ ತಲುಪಿಸಬೇಕೆಂಬ ದಾಸರಲ್ಲಿಯ ತೀವ್ರವಾದ ಸಾಮಾಜಿಕ ಕಳಕಳಿಗೆ ನಿದರ್ಶನ. ಅಲ್ಲದೆ ದಾಸರಲ್ಲಿದ್ದ ಉನ್ನತ ತತ್ವಜ್ಞಾನದಂತೆ ಆಳವಾದ ಪಾಂಡಿತ್ಯ ಪ್ರತಿಭೆಗಳೂ ಇದರಿಂದ ವ್ಯಕ್ತವಾಗುತ್ತವೆ.

ಇತರರಂತೆ ಹರಿದಾಸರಿಗೆ ವಿಷಯಸ್ವಾತಂತ್ರ್ಯವಾಗಲೀ ವಿಚಾರ ಸ್ವಾತಂತ್ರ್ಯವಾಗಲೀ ಅಷ್ಟಾಗಿ ಇರಲಿಲ್ಲ. ಆದರೂ ಏಕತಾನತೆಯನ್ನು ತಪ್ಪಿಸುವುದರೊಂದಿಗೆ ಜಟಿಲವೆನಿಸುವಂತಿದ್ದ ದ್ವೈತಸಿದ್ಧಾಂತದ ವಿಚಾರಗಳನ್ನು ಆಕರ್ಷಕವಾಗಿಸಿದುದು ಹರಿದಾಸರ ಹಿರಿಮೆ. ಪರಿಣಾಮವಾಗಿ ದಾಸಸಾಹಿತ್ಯ ವಿವಿಧ ಕಾವ್ಯ ಪ್ರಕಾರಗಳಿಂದ ಕಂಗೊಳಿಸುವಂತಾಯಿತು. ಕೀರ್ತನೆ, ಸುಳಾದಿ ಹಾಗೂ ಉಗಾಭೋಗಗಳಂತಹ ವಿಶಿಷ್ಟ ಪ್ರಕಾರಗಳಂತೆ ಏಳೆ, ತ್ರಿಪದಿ,



ಸಾಂಗತ್ಯ, ಪಟ್ಪದಿಗಳಂತಹ ವಿವಿಧ ಛಂದೋಬಂಧದ ವೈಕುಂಠವರ್ಣನೆ, ಲಕ್ಷ್ಮೀಶೋಭಾನೆ, ಹರಿಭಕ್ತಿಸಾರ, ಗುಂಡಕ್ರಿಯೆ, ಸ್ವಪ್ನಪದಗಳಂತಹ ದೀರ್ಘ ಹಾಗೂ ಲಘುಕಾವ್ಯಗಳೂ ಇಲ್ಲಿ ಮೈದಳೆದವು. ಜೊತೆಗೆ ಬುಡುಬುಡಿಕೆಪದ, ಡೊಳ್ಳಿನ ಪದ, ಕೋಲುಹಾಡು, ಸುಗ್ಗಿಪದ, ಕಣಿಪದ, ಕೊರವಂಜಿ ಪದ, ಜೋಗುಳ, ಲಾವಣಿಗಳಂತಹ ಜಾನಪದಮಟ್ಟುಗಳೂ ಸಹ ಇಲ್ಲಿ ಸುಳಿದಾಡಿದವು. ಇವುಗಳಿಗೆಲ್ಲ ಕಿರೀಟವಿಟ್ಟಂತೆ ಹರಿಕಥಾಮೃತಸಾರ, ತತ್ವ ಸುವ್ವಾಲಿಗಳಂತಹ ಪ್ರಮೇಯಗ್ರಂಥಗಳೂ ಇಲ್ಲಿ ಮೈವೆತ್ತಿದವು. ಹೀಗೆ ವೇದಾಂತ ತತ್ವಗಳು ಕಾವ್ಯ ಸತ್ವವನ್ನು ಮೈಗೂಡಿಸಿಕೊಂಡುದರಿಂದ ಚೈತನ್ಯಪೂರ್ಣವಾದವು.

ಭಕ್ತಿ ಪಂಥದ ಆಂದೋಲನವಾಗಿ ಮೈದಳೆದ ದಾಸಸಾಹಿತ್ಯ ಸಾಹಿತ್ಯದಂತೆ ಸಂಗೀತಕ್ಕೂ ನೀಡಿದ ಕೊಡುಗೆ ಮಹತ್ವಪೂರ್ಣವಾದುದು. ದಾಸರ ಹರಿಭಕ್ತಿ ಸಂದೇಶ ಮನೆಮನೆಯಂತೆ ಜನರ ಮನದಾಳಕ್ಕೂ ಇಳಿದುದು ದಾಸರು ತುಂಬೂರಿನಾದದಿಂದ. ಸಾಮಾನ್ಯರಲ್ಲಿ ಭಕ್ತಿಯನ್ನು ತುಂಬಿಕೊಡುವ ಸಶಕ್ತ ಮಾಧ್ಯಮವನ್ನು ಹರಿದಾಸರು ಕಂಡುಕೊಂಡಿದ್ದರು. ಇಂತಹ ಅಭಿವ್ಯಕ್ತಿ ಮಾಧ್ಯಮ ಕಾವ್ಯವಾದಲ್ಲಿ ಪಂಡಿತರ ಸೊತ್ತಾಗುವ, ಸಾಧಾರಣ ಉಕ್ತಿಯಾದಲ್ಲಿ ಮರೆತು ಹೋಗುವ ಸಾಧ್ಯತೆಯನ್ನು ಮನಗಂಡಿದ್ದ ದಾಸರು ಸುಲಭವಾಗಿ ಪರಿಣಾಮಗೈಯುವ ಹಾಗೂ ಪುನರಾವರ್ತನೆಯಲ್ಲೂ ಹೊಸ ಅನುಭವ ತರುವ ಸಂಗೀತದಂತಹ ವಿಶಿಷ್ಟಶಕ್ತಿಯನ್ನು ಬಳಸಿಕೊಂಡದ್ದು ಸಾರ್ಥಕವಾಗಿತ್ತು. ಜೊತೆಗೆ ನೃತ್ಯವನ್ನು ಅಳವಡಿಸುವುದರ ಮೂಲಕ ದಾಸರು ಅದನ್ನು ಮತ್ತು ಕಲಾತ್ಮಕಗೊಳಿಸಿದರು. ದಾಸರ ಈ ಪರಿಶ್ರಮದಿಂದ ದ್ವೈತಸಿದ್ಧಾಂತ ವಿಚಾರಗಳು ಜನಪ್ರಿಯಗೊಳ್ಳಲು ಸಹಾಯವಾಗುವುದರ ಜೊತೆಗೆ ಅದೇ ವೇಳೆಯಲ್ಲಿ ದಾಸಸಾಹಿತ್ಯದ ಮೂಲಕ ಸಂಗೀತ, ನೃತ್ಯ, ಸಾಹಿತ್ಯಕ್ಷೇತ್ರಕ್ಕೂ ಸಹ ದಾಸರಿಂದ ಮಹತ್ತರ ಕೊಡುಗೆ ಸಂದಿರುವುದು ಗಮನಾರ್ಹ.

ನಾದಬ್ರಹ್ಮನೆನಿಸಿದ ಪಾಂಡುರಂಗ ವಿಠಲನ ಅಚ್ಚಿನ್ನ ಭಕ್ತರಾದ ಹರಿದಾಸರು ಊರೂರು, ಕೇರಿಕೇರಿ, ಬೀದಿಬೀದಿಗಳಲ್ಲಿ ಸಂಚರಿಸಿ ಲಿಂಗ, ಪಂಗಡ, ಜಾತಿ, ಮತ, ವರ್ಗ, ವಯಸ್ಸುಗಳ ಅಂತರಮೀರಿ ಸಂಗೀತ, ನರ್ತನಗಳಿಂದ ಕೂಡಿದ ಕೀರ್ತನೆಗಳಿಂದ ಜನಮನ ಸೂರೆಗೊಂಡರು. ಸಹಜವಾಗಿ ಹೊರಹೊಮ್ಮುವ ಕೀರ್ತನೆಗಳನ್ನು ಸುಶ್ರಾವ್ಯವಾಗಿ ಹಾಡುತ್ತಾ ಕಟ್ಟಿದ ಗೆಜ್ಜೆಯೊಂದಿಗೆ ಹೆಜ್ಜೆ ಹಾಕುತ್ತಾ ಉತ್ಕಟ ಭಕ್ತಿಯಿಂದ ಭಾವಪರವಶರಾಗಿ ಕುಣಿಯದ ಹರಿದಾಸರೇ ಇಲ್ಲವೆಂದರೂ ಅತಿಶಯೋಕ್ತಿಯಲ್ಲ. ಸಂಗೀತದ ಕೇವಲ ಶ್ರವಣ ಪ್ರಭಾವಕ್ಕಿಂತ ಅದರೊಡನೆ ಬೆರೆತ ಅಭಿನಯ (ನೃತ್ಯ)ದ ಚಾಕ್ಷುಷ ಪ್ರಭಾವ ಹೆಚ್ಚು ಪರಿಣಾಮಕಾರಿಯಾದುದು. ಅಂತೆಯೇ ನೃತ್ಯದಲ್ಲಿ ಅವಿಭಾಜ್ಯ ಅಂಗವೆನಿಸುವಷ್ಟು ವ್ಯಾಪಕವಾಗಿಯೂ ಕೀರ್ತನೆಗಳು ಬಳಕೆಗೊಂಡವು.ದಾಸರ ಕೀರ್ತನೆಗಳ ಇಂತಹ ಅನಿವಾರ್ಯತೆ ನೃತ್ಯ ಕ್ಷೇತ್ರದಲ್ಲಿ ಅವುಗಳಿಗೊಂದು ಶಾಶ್ವತ ಸ್ಥಾನ ಕಲ್ಪಿಸಿಕೊಟ್ಟಿದೆ.

ಸಂಗೀತ, ನೃತ್ಯಗಳಿಗೆ ಒಂದು ಉನ್ನತ ಸ್ಥಾನ ಪ್ರಾಪ್ತವಾದುದು ಹರಿದಾಸರಿಂದ. ದಾಸರು ತತ್ಪೂರ್ವದ ಸಂಗೀತಕ್ಕೆ ಒಂದು ಹೊಸ ದೀಕ್ಷೆಯನ್ನಿತ್ತು ಪರಿಷ್ಕರಿಸುವುದರ ಜೊತೆಗೆ ಅದಕ್ಕೊಂದು ಹೊಸ ಆಯಾಮವನ್ನು ಒದಗಿಸಿದರು. ಈ ದಿಸೆಯಲ್ಲಿ ಪುರಂದರದಾಸರ ಕೊಡುಗೆ ಅಪಾರ ಹಾಗೂ ಅಮೋಘವಾಗಿದೆ. ಧ್ವನಿಯ ಅಭ್ಯಾಸಕ್ಕೆ ಅನುಕೂಲವಾದ 'ಮಾಯಾಮಾಳವ ಗೌಳ' ರಾಗದಲ್ಲಿ ಸಂಗೀತಾಭ್ಯಾಸ ಪ್ರಾರಂಭಿಸುವ ಸುಲಭ ದಾರಿಯ ಸಂಶೋಧನೆ, ಪಿಳ್ಳಾರಿ ಗೀತೆಗಳ ರಚನೆ, ಕ್ಲಿಷ್ಟ ಹಾಗೂ ಅವ್ಯವಸ್ಥಿತವಾಗಿದ್ದ ಸಂಗೀತ ಅಭ್ಯಾಸ ಪದ್ಧತಿಯ ಸುಧಾರಣೆ, ತುಳಜಾಜಿ ಮಹಾರಾಜ, ತ್ಯಾಗರಾಜರು ಮುತ್ತುಸ್ವಾಮಿ ದೀಕ್ಷಿತರು ಮುಂತಾದ ಸಂಗೀತ ತಪಸ್ವಿಗಳಿಗೆ ಪ್ರೇರಣೆ ನೀಡಿದುದು. ಈ ಎಲ್ಲ ಪರಿಶ್ರಮಗಳ ಒಟ್ಟು ಫಲವಾಗಿ ಪುರಂದರ ದಾಸರಿಗೆ ಸಂದ 'ಕರ್ನಾಟಕ ಸಂಗೀತ ಪಿತಾಮಹ' ಎಂಬ ಬಿರುದು ಸಾರ್ಥಕವಾಗಿದೆ. ಸಂಗೀತ, ನೃತ್ಯಗಳನ್ನು ಭಗವದ್ಭಕ್ತಿ ವಿಕಾಸದ ಶಕ್ತಿಗಳನ್ನಾಗಿ ಮಾರ್ಪಡಿಸಿದವರು ಹರಿದಾಸರು. ಮಾತ್ರವಲ್ಲ 'ಕಲಿಯುಗದಿ ಗಾನದಿ ಕೇಶವನೆಂದರೆ ಕೈಗೂಡುವನು ರಂಗವಿಠಲ' 'ಕೀರ್ತನ ಮಾತ್ರದಿ ಕಲಿಯುಗದಲ್ಲಿ ಮುಕುತಿಯನೀವ ಪುರಂದರ ವಿಠಲ' ಎಂದು ಮುಂತಾಗಿ ಇಂತಹ ಸಂಗೀತ, ನೃತ್ಯಗಳಿಂದಲೇ ಭಗವಂತನ ಅನುಗ್ರಹವನ್ನು ಸಹ ಹರಿದಾಸರು ಸಾಧಿಸಿ ತೋರಿಸಿದರು.

ದಾಸರು ಸಂಗೀತ, ನೃತ್ಯಗಳಂಥ ವೈಶಿಷ್ಟ್ಯಗಳ ಹಿನ್ನೆಲೆಯಲ್ಲಿ ಕೇವಲ ತತ್ವಸಿದ್ಧಾಂತಗಳನ್ನು ವಿವರಿಸುವಷ್ಟಕ್ಕೆ ತೃಪ್ತರಾಗಲಿಲ್ಲ. ಅವರು 'ಲೋಕನೀತಿ'ಯಂತಹ ತಮ್ಮ ಮಾತುಗಳಲ್ಲಿ ಸುಖಜೀವನದ ಸಂದೇಶ ನೀಡುವ ಮೂಲಕ ಸಾರ್ಥಕ ಬದುಕಿನ ಕರೆ ನೀಡಿದ್ದಾರೆ. ಜೀವನ ದುಃಖ ಪರಿಹಾರಕ್ಕಾಗಿ ಸಂಸಾರತ್ಯಾಗದ ಉಪದೇಶ ಅನೇಕ ದಾರ್ಶನಿಕರಲ್ಲಿ ಕಂಡುಬರುವುದಾದರೂ ಅಂತಹ ಸಂಸಾರತ್ಯಾಗ ಅಷ್ಟೊಂದು ಸುಲಭವಲ್ಲ. ಆದರೆ ದುಃಖಮಯವಾದ ಸಂಸಾರವನ್ನೇ ಸಾಧನ ಕ್ಷೇತ್ರವನ್ನಾಗಿ ಮಾರ್ಪಡಿಸಿದುದು ದಾಸರ ವೈಶಿಷ್ಟ್ಯ. 'ಈಸಬೇಕು ಇದ್ದು ಜೈಸಬೇಕು' 'ಸಾರಿಯ ಧಾರುಣಿಯ ಧನವ ಬಿಟ್ಟನಾಯಿತೆ ಇದು ವೈರಾಗ್ಯವಲ್ಲ', 'ನೀರಿನೊಳಗೆ ಇನ್ನು ಕಮಲವು ಇದ್ದಂತೆ', 'ಕೆರೆಯನೀರನು ಕೆರೆಗೆ ಚೆಲ್ಲಿದಂತೆ', 'ಶ್ರೀಯರಸ ನಿತ್ತುದನ್ನು ಅವನಿಗೆ ಸಮರ್ಪಿಸಿ ಫಲಭೋಗಿಸುವುದೇ ನಿಜವಾದ ಕರ್ತವ್ಯಾಚರಣೆ. 'ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ ಬಿಲ್ಲಾಗಿ ಇರಬೇಕು ಬಲ್ಲವರೊಳಗೆ', 'ತಾಳುವಿಕೆಗಿಂತ ತಪವು ಬೇರಿಲ್ಲ', 'ತಲ್ಲಣಿಸದಿರು ಕಂಡ್ಯ ತಾಳುಮನವೆ', ಎಂದಿದ್ದಾರೆ ಹರಿದಾಸರು. ಹೆಣ್ಣು, ಹೊನ್ನು, ಮಣ್ಣು ಈ ಈಷಣತ್ರಯವನ್ನು ನಿಯಂತ್ರಿಸಿ ಬಾಹ್ಯ ಹಾಗೂ ಆಂತರಿಕ ಶುದ್ಧಿಗಳೊಂದಿಗೆ ಭಗವದ್ಭಕ್ತಿಯಿಂದ ಸ್ವವಿಹಿತ ಕರ್ತವ್ಯಾಚರಣೆಗೆ ಹರಿದಾಸರು ಕರೆಯುತ್ತಿದ್ದಾರೆ. 'ತಮ್ಮ ತಮ್ಮ ಕರ್ತವ್ಯದಲ್ಲಿ ನಿರತರಾಗಿ ಸಿದ್ಧಿಯನ್ನು ಪಡೆಯಬಹುದೆಂಬ' ಗೀತಾಚಾರ್ಯನ ಸಂದೇಶವನ್ನು ಹರಿದಾಸರು ಜ್ಞಾಪಿಸಿದ್ದಾರೆ.

ಈ ರೀತಿ ಹರಿದಾಸರು 'ಹರಿಯೇ ಸರ್ವೋತ್ತಮ ತಾನು ಅವನ ದಾಸ' ಎಂಬ ನಿತ್ಯಸತ್ಯ ತತ್ವವನ್ನು ವೈಯುಕ್ತಿಕನೆಲೆಯಲ್ಲಿಯೂ ಅನುಭವಿಸಿದರು. ಹರಿದಾಸ ದೀಕ್ಷಾಬದ್ಧರಾಗಿ ಪ್ರಪಂಚವಿರಕ್ತಿಯೊಂದಿಗೆ ಹರಿಭಕ್ತಿಯನ್ನು ಸಾಧಿಸಿ ನುಡಿಗಿಂತ ಹೆಚ್ಚು ನಡೆಯಿಂದಲೇ ಲೋಕನೀತಿಯನ್ನು ಬೋಧಿಸಿ ಸಮಾಜವನ್ನು ಜಾಗೃತಗೊಳಿಸಿದರು. ಹೀಗೆ ವ್ಯಷ್ಟಿ ಸಮಷ್ಟಿಗಳ ಅಭ್ಯುದಯ ಸಾಧನೆಗಳ ಮೂಲಕ ಒಟ್ಟು ಸಮಾಜೋನ್ನತಿಗೆ ಶ್ರಮಿಸಿದ ಹರಿದಾಸರ ವೈಶಿಷ್ಟ್ಯಪೂರ್ಣವಾದ ಈ ಸಾಧನೆ ಆಧ್ಯಾತ್ಮಿಕ ಸಾಧನೆಗೊಂದು 'ದಿವ್ಯಜ್ಯೋತಿ'.

## ತಿಂಗಳಿನ ಮುಖ್ಯದಿನಗಳು

### ಡಿಸೆಂಬರ್ — 1995

| | | |
|---|---|---|
| 2-12-95 | ಶನಿವಾರ | ಗೀತಾಜಯಂತಿ. |
| 3-12-95 | ಭಾನುವಾರ | ಚಕ್ರತೀರ್ಥ ಮುಕ್ಕೋಟಿ. |
| 4-12-95 | ಸೋಮವಾರ | ಹನುಮದ್ವ್ರತ. |
| 5-12-95 | ಮಂಗಳವಾರ | ತಿರುಮಂಗೈ ಆಳ್ವಾರ್ ಶಾತ್ತುಮೊರೆ. |
| 6-12-95 | ಬುಧವಾರ | ಕಪಿಲತೀರ್ಥ ಮುಕ್ಕೋಟಿ. |
| 7-12-95 | ಗುರುವಾರ | ತಿರುಪ್ಪಾಣಿ ಆಳ್ವಾರ್ ವರ್ಷತಿರುನಕ್ಷತ್ರ. |
| 21-12-95 | ಗುರುವಾರ | ತೊಂಡರಡಿಪ್ಪೊಡಿ ಆಳ್ವಾರ್ ವರ್ಷತಿರುನಕ್ಷತ್ರ. |

# ಭಗವಂತನನ್ನು ಕಾಣುವ ದಾರಿ

---ಹೆಚ್. ಎನ್. ನರಸಿಂಹಮೂರ್ತಿ.

ಜಗತ್ಸೃಷ್ಟಿಯಲ್ಲಿರುವ ಪ್ರತಿಯೊಂದು ಜೀವಿಯೂ (ಯಾವ ಯೋನಿಯಲ್ಲಿ ಜನಿಸಿದುದೇ ಆಗಲೀ) ಸುಖವನ್ನೇ ಅನುಭವಿಸಲು ಇಷ್ಟಪಡುತ್ತದೆ. ಸುಖದ ಪ್ರಮಾಣವು ದೊಡ್ಡದಾಗಿರಲೀ, ಚಿಕ್ಕದಾಗಿರಲೀ, ಹೆಚ್ಚು ಸಮಯದ್ದಾಗಿರಲೀ, ಕಡಿಮೆ ಸಮಯದ್ದಾಗಿರಲೀ, ಪರವಾಗಿಲ್ಲ. ಈ ಭಾವನೆ ಸುಖ ಬರುವುದರ ಮುಂಚೆ ಇರುತ್ತದೆ. ಅದು ಬಂದಾಗ ದೊಡ್ಡದಾಗಿಯೂ, ದೀರ್ಘಕಾಲದ್ದಾಗಿಯೂ, ಮುಗಿಯದಂತಹದೂ ಆಗಿರಲೆಂಬ ಆಸೆ ಮೂಡುತ್ತದೆ. ಇದು ಪ್ರಕೃತಿ ನಿ... ಮನಸ್ಸಿನ ಸಹಜ ಸ್ವಭಾವ.

ಆದರೆ ಸುಖದ ಸ್ವರೂಪ ಎಂತಹದು, ಮುಗಿಯದಂತಹ ಸುಖವನ್ನು ಪಡೆಯುವುದಕ್ಕೆ ಏನು ಮಾಡಬೇಕು ಎಂಬ ಪ್ರಶ್ನೆಗಳನ್ನು ಮನಸ್ಸಿನಲ್ಲಿ ಹಾಕಿಕೊಂಡಾಗ ಕೆಲವು ರೀತಿಯ ಯೋಚನಾ ಲಹರಿಗಳು ಉತ್ಪನ್ನವಾಗುವುದು ಸಾಮಾನ್ಯ. ಪ್ರತಿ ಜೀವಿಯ ಪರಮ ಗುರಿಯಾದ ಶಾಶ್ವತವಾದ ಸುಖವನ್ನು ಪಡೆಯಲು ಏನು ಮಾಡಬೇಕೆಂಬುದೇ ಈಗಿನ ಲೇಖನದ ಉದ್ದೇಶ.

ಮೊದಲು ನಮ್ಮ ದೇಹ, ಮನಸ್ಸು ಬುದ್ಧಿ ಅಹಂಕಾರ, ನಾನು ಎಂಬುದರ ಸ್ವರೂಪವನ್ನು ಸ್ಥೂಲವಾಗಿ ತಿಳಿಯೋಣ.

ಪ್ರತಿಯೊಂದು ದೇಹವೂ ಮೂಳೆ, ಮಾಂಸಖಂಡ, ರಕ್ತ, ಶಾಖ, ಗಾಳಿ, ಖಾಲಿ ಇರುವ ಜಾಗಗಳಾದ ಬಾಯಿ, ಶ್ವಾಸಕೋಶ ಮುಂತಾದುವುಗಳಿಂದ ತುಂಬಿದೆ. ಇವು ಇರಲೇಬೇಕಾದ್ದು. ದೇಹದಲ್ಲಿ ಕಡಿಮೆ ಪ್ರಮಾಣದಲ್ಲಿಯಾದರೂ ಇದ್ದೇ ಇರುತ್ತವೆ. ಇದರಲ್ಲಿ ಮೂಳೆ ಮತ್ತು ಗಟ್ಟಿ ಪದಾರ್ಥಗಳು ಪೃಥಿವೀ ತತ್ತ್ವವನ್ನೂ, ಹರಿಯುತ್ತಿರುವ ರಕ್ತಾದಿಗಳು ಆಪಃ (ನೀರಿನ) ತತ್ತ್ವವನ್ನೂ, ಶಾಖವು ತೇಜಸ್ಸಿನ ತತ್ತ್ವವನ್ನೂ, ಗಾಳಿಯು (ಪ್ರಾಣವು) ವಾಯು ತತ್ತ್ವವನ್ನೂ, ಖಾಲಿ ಇರುವ ಸ್ಥಳಗಳು ಆಕಾಶ ತತ್ತ್ವವನ್ನೂ ಪ್ರತಿನಿಧಿಸುತ್ತವೆ. (ಪೃಥಿವ್ಯಾಪಸ್ತೇಜೋ ವಾಯು ರಾಕಾಶ - ಇವು ಪಂಚಮಹಾಭೂತಗಳು.)

ದೇಹವು ನಿಲ್ಲುವುದಕ್ಕೆ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ಪಂಚಪ್ರಾಣಗಳು ಇರುತ್ತವೆ.

ಶರೀರವು ಪ್ರಪಂಚದೊಡನೆ ವ್ಯವಹಾರಮಾಡುವುದಕ್ಕೆ ಚರ್ಮ, ಕಣ್ಣು, ಕಿವಿ, ನಾಲಿಗೆ ಮತ್ತು ಮೂಗು (ತ್ವಕ್, ಚಕ್ಷು ಶ್ರೋತ್ರ - ಜಿಹ್ವಾ, ಘ್ರಾಣ) ಮತ್ತು ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧದ ಶಕ್ತಿಗಳು ದೇಹದಲ್ಲಿ ಇವೆ. ಪ್ರಮಾಣಗಳು ಬೇರೆ ಬೇರೆಯಾಗಿರಬಹುದು ಅಷ್ಟೆ.

ಇವುಗಳ ಜೊತೆಗೆ ಒಳ್ಳೆಯ ಗುಣಗಳು, ಮಿಶ್ರವಾದ್ದು, ಕೀಳಾದ್ದು ಎಂದು ತಿಳಿಸುವ ಸತ್ವರಜಸ್ತಮೋ ಗುಣಗಳು ಇರಲೇಬೇಕು, ಇಲ್ಲಿಯೂ ಪ್ರಮಾಣಗಳು ಕ್ಷಣ ಕ್ಷಣದಲ್ಲಿಯೂ ಬದಲಾಗುತ್ತಿರುತ್ತವೆ.

ಮತ್ತೆ ಇವನ್ನೆಲ್ಲಾ ನಿರ್ವಹಿಸುವುದಕ್ಕೆ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳು ಇರಲೇಬೇಕು. ಯಾವ ಪ್ರಮಾಣದಲ್ಲಿ ಈ ಪ್ರತಿಯೊಂದು ಇದ್ದರೂ, ಅವುಗಳು ದೇಹದ ಮೇಲೆ ಪ್ರಭಾವ ಬೀರುತ್ತದೆ.

ಹಾಗಾದರೆ ಮೇಲಿನ ಎಲ್ಲವೂ ಇದ್ದರೂ ಸಹ, ತೇಜಶ್ಶಕ್ತಿ, ಆತ್ಮ (ಜೀವ) ಇರದಿದ್ದರೆ ದೇಹ ನಡೆಯುವುದು ಸಾಧ್ಯವಿಲ್ಲ.

ಮನ, ಬುದ್ಧಿ, ಅಹಂಕಾರ, ಚಿತ್ತಗಳು, ಸತ್ವರಜಸ್ತಮೋ ಗುಣಗಳು, ಶಬ್ದ ಸ್ಪರ್ಶ ರೂಪ ರಸ ಗಂಧ ಮತ್ತು ತ್ವಕ್ ಚಕ್ಷುಃ ಶ್ರೋತ್ರಜಿಹ್ವಾಘ್ರಾಣಗಳು, ಹಿಂದಿರುವ ಶಕ್ತಿಗಳು. ಪ್ರಾಣಾಪಾನ ವ್ಯಾನೋದಾನ ಸಮಾನ ಪಂಚಪ್ರಾಣಗಳು ಆತ್ಮವನ್ನು ಅಂಟಿಕೊಂಡಿರುವುದರಿಂದ ಆತ್ಮವು ಎಲ್ಲಿ ಹೋದರೆ ಅಲ್ಲಿಗೆ ಜೊತೆಯಲ್ಲಿಯೇ ಹೋಗುತ್ತವೆ. ಇಷ್ಟೇ ಆದರೆ ಸರಿ; ಆದರೆ ದೇಹದಲ್ಲಿರುವಾಗ ಪ್ರಪಂಚದೊಡನೆ ಮಾಡಿದ ಅಪಾರ ಕರ್ಮಗಳು ಮತ್ತು ಅವುಗಳ ಫಲಗಳು ಸಹ ಆತ್ಮವನ್ನು ಅನುಸರಿಸುತ್ತವೆ. ಹೀಗೆ ಹೋದಾಗ ಮುಂದೆ ಯಾವ ದೇಹವನ್ನೇ ಪಡೆದರೂ ಕರ್ಮಗಳು ಸಂಚಿತ, ಪ್ರಾರಬ್ಧ ಕರ್ಮಗಳೆಂದು ತಿಳಿಯಲ್ಪಟ್ಟು ಮುಂದೆ ಶುರುವಾಗುವ ಆಗಮ ಕರ್ಮಗಳನ್ನು ಸಂಗ್ರಹಿಸುತ್ತಾ ಮುಂದೆ ಮುಂದೆ ನಡೆಯುತ್ತವೆ. ಕೊನೆಯೇ ಇಲ್ಲವೇನೋ ಎಂಬಂತೆ ಕರ್ಮಗಳು ಕಡಿಮೆಯಾಗುತ್ತಲೂ, ಹೊಸ ಹೊಸ ಕರ್ಮ ಸಂಗ್ರಹಗಳನ್ನು ಮಾಡುತ್ತಲೂ ಹೋಗುತ್ತಿರುವಾಗ ಜೀವಿಯ ಪರಮ ಗುರಿಯಾದ ಶಾಶ್ವತ ಸುಖವನ್ನು ಪಡೆಯುವುದೆಂತು! ಈ ಭಾವನೆ ಬಂದ ಕ್ಷಣದಲ್ಲಿ ಅಗಾಧವಾದ ಪ್ರಶ್ನೆ ಬರುವುದರೊಂದಿಗೆ ಮನಸ್ಸನ್ನು ಶೂನ್ಯ ಮತ್ತು ಅಸಹಾಯಕ ಸ್ಥಿತಿಗೆ ತಂದುಬಿಡುತ್ತದೆ.

ಆಗಲೀ ಭಗವಂತನು ಯಾರು, ಎಲ್ಲಿದ್ದಾನೆ, ಹೇಗೆ - ಇಂತಹ ಮನಸ್ಸಿಗೆ ಸುಖವನ್ನು ಕೊಡುತ್ತಾನೆ - ಎಂಬ ಭಾವನೆಗೆ ಉತ್ತರ ಹುಡುಕಲು ಪ್ರಾರಂಭವಾಗುತ್ತದೆ.

ಈ ಸಮಯದಲ್ಲಿ ಮನಸ್ಸು ಭಗವಂತನನ್ನು ಅವನ ಕಾರ್ಯವೈಖರಿಯನ್ನು ಹುಡುಕುತ್ತದೆ. ಎಂತಹ ಸ್ಥಿತಿಯಲ್ಲಿ ಆ ಕ್ಷಣದಲ್ಲಿರಲಿ. ಅಷ್ಟನ್ನು ಕೊಟ್ಟ ಭಗವಂತನನ್ನು ಶ್ಲಾಘಿಸುತ್ತೇವೆ. ಏಕೆಂದರೆ ಅವನು ಇನ್ನೂ ಕಷ್ಟವಾದ ಸನ್ನಿವೇಶವನ್ನು ನಿರ್ಮಿಸಬಹುದಾಗಿತ್ತು. ಆಗ ಇನ್ನೂ ಕಷ್ಟವಾಗುತ್ತಿತ್ತು ಎಂದು ತಿಳಿದು ಪರಮಾತ್ಮನಿಗೆ ಕೃತಜ್ಞತೆಯನ್ನು ಹೇಳಲು ಮನಸ್ಸು ಮುಂದಾಗುತ್ತದೆ. ಆದರೇ...... ನಿಜವಾದ ಕರ್ತೃಗಳು ಅಥವಾ ಈ ಪರಿಸ್ಥಿತಿಗೆ ಕಾರಣರು ಯಾರು!! ಯಾರು!!! ಎಂದರೇ ಆ ಜೀವಿಯೇ! ಏಕೆಂದರೆ ಪ್ರಪಂಚದೊಡನೆ ವ್ಯವಹಾರ ಮಾಡಿದವರು ಆ ಜೀವಿಯೇ! ಅದಕ್ಕೆ ಅಂಟಿಕೊಂಡಿರುವ ಮನಸ್ಸು, ಬುದ್ಧಿ, ಅಹಂಕಾರ ಮತ್ತು ಚಿತ್ತ - ನಾನು! ನಾನು ಎಂಬುದೇ.

ದೇಹದ ರಚನೆ ಹೇಗಿದೆ ಎಂದರೆ - ಪಂಚಭೂತಗಳಿಂದಾದ ದೇಹವೇ ಅನ್ನಮಯ ಕೋಶ, ಪ್ರಾಣಗಳಾದಾದದ್ದು ಪ್ರಾಣ ಮಯ ಕೋಶ, ಮನಸ್ಸಿನಿಂದ ಆವರಿಸಿದ್ದು ಮನೋಮಯ ಕೋಶ, ತಿಳಿವಳಿಕೆಯಿಂದಾದ್ದು ವಿಜ್ಞಾನಮಯ ಕೋಶ, ಇದರಿಂದ ಬರುವ ಆನಂದದಿಂದಾದದ್ದು ಆನಂದಮಯ ಕೋಶ, ಇದರಲ್ಲಿಯೇ ಭಗವಂತನು ಅಥವಾ ದೇವಿಯು ಸದಾ ವಿರಾಜಿಸುತ್ತಾಳೆ. ಅವಳನ್ನು ಸೇರಬೇಕಾದರೆ ಮೇಲೆ ಹೇಳಿದ ಕೋಶಗಳನ್ನು ಕ್ರಮವಾಗಿ ಒಂದೊಂದನ್ನು ದಾಟಿ ಅಂದರೆ ಲಯ ಮಾಡುತ್ತಾ ಒಳಗೆ ಹೋದರೆ ಪಂಚಕೋಶಾಂತರ ಸ್ಥಿತಳಾದ ದೇವಿಯನ್ನು ಸಂದರ್ಶಿಸಿ ಆನಂದದಲ್ಲಿರಬಹುದು. ಇದು ಒಂದು ರೀತಿಯಲ್ಲಿ ತಿಳಿಯುವ ರೀತಿ.

ಆದರೆ ಇನ್ನೊಂದು—

ಕಾಣುವ ಶರೀರವೇ ಸ್ಥೂಲ ಶರೀರ,
ಒಳಗಿರುವುದೇ ಇದೇ ರೀತಿಯದು
ಸೂಕ್ಷ್ಮಶರೀರ, ಅದರೊಳಗಿರುವುದು
ಆತ್ಮನ ಜೊತೆಯಲ್ಲಿ ಸದಾ ಹೋಗುತ್ತಿರುವುದು
ಕಾರಣ ಶರೀರ, ಅದರೊಳಗೆ, ಎಲ್ಲದರಲ್ಲೂ
ಒಳಗೆ ಇರುವ ತೇಜಶ್ಶಕ್ತಿ - ಆತ್ಮ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ಈ ಆಲೋಚನೆ ಹೇಗಿದೆ ಎಂದರೆ ಈರುಳ್ಳಿಯ ಹೊರ ಹೊರ ಸಿಪ್ಪೆಯನ್ನು ತೆಗೆಯುತ್ತಾ ಹೋದರೆ ಕೊನೆಯಲ್ಲಿ ಉಳಿಯುವುದು ಈರುಳ್ಳಿಯಲ್ಲ ಶೂನ್ಯ, ಅದೇ ನಿರಾಕಾರ ಭಗವಂತ. ಅದೇ ಪರಮ ಶಾಂತಿಯನ್ನು ಕೊಡುವ ಪರಬ್ರಹ್ಮ

ಈಗ ಈ ರೀತಿ ನಾನು ಎಂಬ ಅಹಂ, ಮನಸ್ಸು ಬುದ್ಧಿಗಳನ್ನು ಸರಿಪಡಿಸಿಕೊಂಡು, ಸತ್ವರಜಸ್ತಮೋ ಗುಣಗಳಲ್ಲಿ ಸಾತ್ವಿಕ ಗುಣ - ಭಾವನೆಗಳನ್ನು ಎಲ್ಲದರಲ್ಲಿಯೂ ಮತ್ತು ಎಲ್ಲರಲ್ಲಿಯೂ ಕಂಡು ವ್ಯವಹರಿಸಿಕೊಂಡರೆ ಅದೇ ಪ್ರಪಂಚವು ಅನುರೂಪವಾಗಿ ಕಾಣುತ್ತದೆ, ಸ್ಪರ್ಶಿಸುತ್ತದೆ ಮತ್ತು ಅದು ಭಗವಂತನ ವಿಭೂತಿ ಎಂಬ ತಿಳಿವಳಿಕೆ ತಾನಾಗಿಯೇ ಬರುತ್ತದೆ. ಮತ್ತು ಎಲ್ಲಾ ದೇಹಗಳಲ್ಲೂ ಚರಾಚರ ವಸ್ತುಗಳಲ್ಲಿಯೂ, ಭಗವಂತನ ಸೃಷ್ಟಿಯಲ್ಲಿರುವ ಪ್ರತಿಯೊಂದರಲ್ಲಿಯೂ ಅದರ ಹಿಂದಿರುವ ತೇಜಶ್ಶಕ್ತಿ ಪರಮಾತ್ಮನೇ! ಎಂಬ ಗೂಡಾರ್ಥ ದೆಳಕಿಗೆ ಬರುತ್ತದೆ. ಇದೇ ಪರಮ ಆಧ್ಯಾತ್ಮಿಕ ಜ್ಞಾನ, ವೇದಾಂತ - ಏನೆಂದು ಕರೆದರೂ ಸರಿಯೇ! ಈ ಜ್ಞಾನದ ತಿಳಿವಳಿಕೆಯಿಂದ ಮಾತ್ರವಲ್ಲ! ಅನುಸರಣೆಯಿಂದ ಆಚರಣೆಗೆ ತಂದಾಗ ವ್ಯಕ್ತಿಗೆ ಶಾಶ್ವತ ಸುಖ ಲಭಿಸುತ್ತದೆ.

ಜೊತೆಗೆ ಮನಶ್ಶಾಂತಿಗೆ ದೇಕಾದ ಅನೇಕ ಸಲಕರಣೆಗಳಿಂದ ಕೂಡಿರುವ ಮನಸ್ಸಿಗೆ ದೇವತಾ ವಿಚಾರಗಳಲ್ಲಿ ಗೌರವ, ಭಯಭಕ್ತಿಗಳಿಂದ ಶ್ರವಣ, ಮನನ, ಧ್ಯಾನಗಳಲ್ಲಿ ಮನಸ್ಸು ಇಷ್ಟಪಡುತ್ತದೆ. ಆದರೆ ಮನಸ್ಸನ್ನು ಯಾವಾಗಲೂ ಇದರಲ್ಲಿ ತೊಡಗಿಸಬೇಕು. ಅದಕ್ಕೇನೇ ಮೇಲಿನವುಗಳಲ್ಲಿ ತೊಡಗಿಸಿರುವ ಸಮಯವನ್ನು ಬಿಟ್ಟು ಉಳಿದ ಸಮಯದಲ್ಲಿ ಮಾನಸಿಕವಾಗಿ ಭಗವಂತನ ಯಾವುದಾದರೂ ಒಂದು (ಉಪದೇಶಿಸಿದ್ದು ಆದರೆ ಉತ್ತಮ) ನಾಮ ಸ್ಮರಣೆಯನ್ನು ಮಾಡುತ್ತಲೇ ಇರಲು ಸರ್ವ ಪ್ರಯತ್ನವನ್ನು ಮಾಡಬೇಕು. (ಇಲ್ಲದಿದ್ದರೆ ದೇರೆ ವ್ಯವಹಾರಗಳಲ್ಲಿ ಮನಸ್ಸು ಹಾರಿ, ಬಿದ್ದು ಹೊಸ ಕೊಳೆಯನ್ನೂ ಸಂಗ್ರಹಿಸುತ್ತದೆ). ಇದೇ ಮನೋಧ್ಯೇಯವೇ ಪರಮ ಪವಿತ್ರವಾದ ದಾರಿ ಮತ್ತು ಗುರಿಯಾಗಿರದೇಕು! ಆಗಲೇ ಪರಮಶಾಂತಿ! ಶಾಶ್ವತ ಸುಖ, ಶಾಶ್ವತ ಶಾಂತಿ, ಆನಂದಕ್ಕೆ ದಾರಿ, ಗುರಿ!!! ಹೇ ಮನಸ್ಸೇ! ಮುನ್ನಡೆ! ಮುನ್ನಡೆ, ಮುನ್ನಡೆ, ಕ್ಷಣಮಾತ್ರವೂ ನಿಲ್ಲದೇಡ! ನಿಂತರೆ ಹೊಸಕೊಳೆ ಬರುತ್ತದೆ, ಎಚ್ಚರದಿಂದಿರು!!!

ಸದ್ಗುರು ಪರಬ್ರಹ್ಮಣೇ ನಮಃ, ನಮೋನ್ನಮಃ ಗುರುವೇ ಪರಬ್ರಹ್ಮ ವಿಷ್ಣು, ಮಹೇಶ್ವರ! ಅವನೇ ಪರಮ ಶಕ್ತಿ! ಪರಾಶಕ್ತಿ!!! 

ಅಜ್ಞಾನ ತಿಮಿರಚ್ಛೇದಂ
ಬುದ್ಧಿಸಂಪತ್ ಪ್ರದಾಯಕಂ
ವಿಜ್ಞಾನ ವಿಮಲಂ ಶಾಂತಂ
ವಿಜಯಾಖ್ಯ ಗುರುಂಭಜೇ

ಶರಣು ಶರಣು ಶರಣು
ವಿಜಯದಾಸಾರ್ಯರೆ
ಶರಣಾದೆ ತವ ವಾರಿಜಾಂಘ್ರಿಯುಗ್ಮದಲಿ
ಸೂರಿ ಸುರಜನ ಗಂಗಾಧರ
ವಾಯು ವಿಧಿ ವಿನುತ
ಶಿರಿವರ ಸರ್ವೋತ್ತಮನ ಪ್ರಿಯತರ ದಾಸಾರ್ಯ

# ವಿಜಯದಾಸರ ಮಹಿಮೆ

---ಆರ್. ಕೆ. ಗೋಪಾಲಕೃಷ್ಣ.

ಮೇಲಿನ ಮೊದಲನೆಯ ಶ್ಲೋಕ ವಿಜಯದಾಸಾರ್ಯರ ಮೇಲೆ ರಚಿತವಾದ ಸುಪ್ರಸಿದ್ಧ ಶ್ರೇಷ್ಠ ಶ್ಲೋಕವಾಗಿದೆ. ಇದನ್ನು ನಿತ್ಯ ಪಠಿಸುವುದರಿಂದ ವಿಜಯರಾಯರ ಕೃಪೆಯಿಂದ ನಮ್ಮ ಅಜ್ಞಾನದ ಕತ್ತಲೆಯು ನಿವಾರಣೆಯಾಗಿ ಜ್ಞಾನದ ಬೆಳಕು ಹೊರಹೊಮ್ಮಿ ಬುದ್ಧಿ ಸಂಪತ್ತು ವೃದ್ಧಿಯಾಗುತ್ತದೆ ಎಂಬುದು ವಿಧಿತ.

ಎರಡನೆಯ ಶ್ಲೋಕವು ಅಪರೋಕ್ಷಜ್ಞಾನಿಗಳೂ, ದೇವಾಂಶ ಸಂಭೂತರೂ ಆದ ಪ್ರಸನ್ನ ಶ್ರೀನಿವಾಸ ದಾಸಾರ್ಯರಿಂದ ರಚಿತವಾದ "ಪ್ರಸನ್ನ ಶ್ರೀ ವಿಜಯದಾಸಾರ್ಯಚರಿತ್ರೆ"ಯ ಮೊದಲನೆಯ ಸ್ತೋತ್ರ ನುಡಿ.

ದಾಸಾರ್ಯರು, "ಪ್ರಸನ್ನ ಶ್ರೀ ವಿಜಯದಾಸಾರ್ಯ ಚರಿತ್ರೆ, ಹಾಗೂ ಪ್ರಸನ್ನ ಶ್ರೀಗೋಪಾಲ ದಾಸಾರ್ಯವಿಜಯ", ಎಂಬ ಕಿರುಹೊತ್ತಿಗೆಯ ಪ್ರಖ್ಯಾತ ಗ್ರಂಥ ಬರೆಯುವಾಗ ಪ್ರಾರಂಭದ ಶ್ಲೋಕ ಮೇಲಿನದಾಗಿರುತ್ತದೆ. ಕಿರುಗ್ರಂಥದಲ್ಲಿ ದಾಸಾರ್ಯರು ವಿಜಯದಾಸಾರ್ಯರನ್ನು ಐದು ಅಧ್ಯಾಯಗಳಲ್ಲಿ ಒಟ್ಟು ೧೭೦ ಪದ್ಯಗಳು ಮತ್ತು ತಮ್ಮ ಪ್ರೀತಿಯ ಗುರುಗಳಾಗಿರುವ ಗೋಪಾಲದಾಸಾರ್ಯರನ್ನು ೧೨೪ ಪದ್ಯಗಳಲ್ಲಿ ಅನನ್ಯ ಶ್ರದ್ಧಾ ಭಕ್ತಿಯಿಂದ ಗುಣಗಾನ ಮಾಡಿರುತ್ತಾರೆ.

ಪ್ರಸನ್ನ ಶ್ರೀನಿವಾಸದಾಸರು ಆಸ್ತಿಕ ಬಂಧುಗಳಿಗಾಗಿ ಅನೇಕ ಉಪಯುಕ್ತ ಗ್ರಂಥಗಳನ್ನು ರಚಿಸಿರುತ್ತಾರೆ. ಅವುಗಳಲ್ಲಿ ಮುಖ್ಯವಾದವುಗಳು - ಪ್ರಸನ್ನ ಶ್ರೀನಿವಾಸ ಕಲ್ಯಾಣ, ಸರ್ವಾಶ್ರಯ ಸ್ತೋತ್ರ, ಆನಂದಮಯ ಸ್ತೋತ್ರ, ಪ್ರಸನ್ನ ರಾಮಾಯಣ ಹಾಗೂ ಅನೇಕ ದೇವರ ನಾಮ (ಎರಡು ಸಂಪುಟ) ಗಳನ್ನು ಬರೆದಿರುತ್ತಾರೆ. ಇದಲ್ಲದೆ "ಪ್ರಸನ್ನ ನಿರ್ಣಯ ರಾಮಾಯಣ"ವನ್ನು ಏಳು ಕಾಂಡಗಳು ಒಂದು ಸುದೀರ್ಘ ಗ್ರಂಥ ರಚಿಸಿರುತ್ತಾರೆ. ಇದರ ಮುಖ್ಯ ವೈಶಿಷ್ಟ್ಯ ದಾಸರು ಉತ್ತರಕಾಂಡವನ್ನು ಬಹಳ ಅದ್ಭುತವಾಗಿ ಸವಿಸ್ತಾರವಾಗಿ ಬರೆದಿರುತ್ತಾರೆ. ಮತ್ತು "ಶ್ರೀ ವಿಷ್ಣು ಸಹಸ್ರನಾಮ" (ಸ್ತೋತ್ರ ರೂಪ ಭಾಷ್ಯ) ರಚಿಸಿರುತ್ತಾರೆ.

ವಿಜಯದಾಸಾರ್ಯರ ಬಗ್ಗೆ ರಚಿಸಿರುವುದನ್ನು ತಿಳಿಯುವ ಮುನ್ನ ಪ್ರಸನ್ನ ಶ್ರೀನಿವಾಸದಾಸಾರ್ಯರ ಜೀವನದ ಬಗ್ಗೆ ಸ್ವಲ್ಪ ತಿಳಿಯುವುದು ಒಳ್ಳೆಯದು.

ದಾಸರು ಕಾವೇರಿ, ತಾಮ್ರಪರ್ಣಿ ನದಿಗಳ ಮಧ್ಯ ಪ್ರದೇಶದಲ್ಲಿ ಕಾವೇರಿಯ ಒಂದು ಉಪನದಿಯ ತೀರದಲ್ಲಿರುವ ಸೂಲಪುರವೆಂಬ ಗ್ರಾಮದಲ್ಲಿ ಒಂದು ವಿಶ್ವಾವಸು ಸಂವತ್ಸರದಲ್ಲಿ ಅವ



ತಾರ ಮಾಡಿದರೆಂದು ತಿಳಿದುಬರುತ್ತದೆ. (ಅವರ ಗ್ರಂಥದ ಆಧಾರದಿಂದ) ತಂದೆ ಸಾಮವೇದಿ ಮಾಧ್ವರಾದ ವೆಂಕಟಕೃಷ್ಣಾಚಾರ್ಯರು, ತಾಯಿ ಸೀತಮ್ಮ. ಈ ದಂಪತಿಗಳೂ ದಾಸರು ಹುಟ್ಟುವದಕ್ಕೆ ಮೊದಲು ಮಂತ್ರಾಲಯದ ಪ್ರಭುಗಳ ಸೇವೆ ಮಾಡಿದ್ದುದರ ಫಲವಾಗಿ ರಾಯರು ಈ ದಂಪತಿಗಳಿಗೆ ಅನುಗ್ರಹಿಸಿದ್ದದ್ದೇ ಈ ಪುತ್ರಭಾಗ್ಯ.

ಇವರು ಪುಟ್ಟ ಬಾಲಕರಾಗಿದ್ದಾಗಲೇ ಹರಿಕಥೆ ಪುರಾಣ ಶ್ರವಣದಲ್ಲಿ ಆಸಕ್ತಿ ಇದ್ದವು. ತಾಯಿ, ತಂದೆ, ಸೋದರ ಮಾವ ಮುಂತಾದ ಹಿರಿಯರು ಹುಡುಗನಿಗೆ ಸಂಸ್ಕೃತ ಲಿಪಿ ಕಲಿಸಿದರು. ಇವರಿಗೆ ಕನ್ನಡ ಮಾತನಾಡಲೂ ಬಂದರೂ, ಓದಲು ಬರೆಯಲು ಬಾರದು. ಆದರೂ ಕನ್ನಡವನ್ನು ಕಲಿತು ಸಂಸ್ಕೃತ ಲಿಪಿಯಲ್ಲಿ ಸಾಹಿತ್ಯ ಅದ್ವಿತೀಯ ಶೈಲಿಯಲ್ಲಿ ರಚಿಸಿರುವ ಧಾಟಿ ನೋಡಿದರೆ ಖಂಡಿತ ಪರಮಾತ್ಮ ಇವರಿಗೆ ಒಲಿದು, ಇವರಲ್ಲಿ ನಿಂತು ಸಾಹಿತ್ಯ ರಚಿಸಿರುವನೇನೋ ಎಂದು ಭಾಸವಾಗುತ್ತದೆ.

ಪ್ರಸನ್ನ ಶ್ರೀನಿವಾಸದಾಸರು ಪ್ರಖ್ಯಾತ ಹರಿದಾಸ ಚತುಷ್ಟಯರಲ್ಲಿ ಒಬ್ಬರಾದ ಗೋಪಾಲದಾಸರ ಸಾಕ್ಷಾತ್ ಶಿಷ್ಯರೆಂದು ಪ್ರತೀತಿ ಇದೆ. ಇವರೀರ್ವರು ಸಮಕಾಲೀನರಲ್ಲದಿದ್ದರೂ ಗೋಪಾಲದಾಸರು ನೇರವಾಗಿ ಇವರಲ್ಲಿಗೆ ಬಂದು ಇವರನ್ನು ಅನುಗ್ರಹಿಸಿರುವರೆಂಬ ಪ್ರತೀತಿ ಇದೆ.

ದಾಸರಾಯರು ಗೋಪಾಲದಾಸರನ್ನು ಕುರಿತು ಬರೆದಿರುವ ಒಂದು ದೇವರ ನಾಮದಲ್ಲಿ, "ದೇಸರದಿ ನಾ ಸೀತಾಪತಿಪಲ್ಲಿಯಲಿ ಮಲಗೆ ಏಸು ಕರುಣವೊ ದಾಸರಾಜ ನೀ ಬಂದು ವ್ಯಾಸಮುನಿ ಮಠ ಗುರು ಪೂಜೆಗೆ ಕರೆದೊಯ್ದು ದಶಪ್ರಮತಿ ಭಾಷ್ಯ ಪಠನಾರ್ಚನೆಯ ತೋರಿಸಿದೆ" ಎಂದು ಸ್ತೋತ್ರಗೈದಿದ್ದಾರೆ.

ಪ್ರಸನ್ನ ಶ್ರೀನಿವಾಸದಾಸರ ದೇವರ ನಾಮಗಳಲ್ಲಿ ಒಂದು ಕಡೆ ಗೋಪಾಲದಾಸರ ಸರಳತೆ, ಅರ್ಥವಂತಿಕೆಗಳು ಇನ್ನೊಂದು ಕಡೆ ಜಗನ್ನಾಥದಾಸರ ಪ್ರೌಢಿಮೆ ಪದ ಸೌಷ್ಠವಗಳು ಜೊತೆ ಜೊತೆಯಾಗಿ ಕಂಡುಬರುತ್ತಿರುವ ವಿಶೇಷ ಪ್ರೌಢಿಮೆ ಹೊಂದಿವೆ.

"ಧನ್ಯನಾದೆನು ಇಂದು ವೆಂಕಟನ ಕಂಡು ಅನ್ಯರೊಬ್ಬರು ಇವಗೆ ಸರಿ ಪರರು ಇಲ್ಲ", ಎಂದು ಶ್ರೀ ವೇಂಕಟೇಶನ ದರ್ಶನ ಭಾಗ್ಯ ಪಡೆದ ಪುಣ್ಯಶಾಲಿ ಪ್ರಸನ್ನ ಶ್ರೀನಿವಾಸದಾಸಾರ್ಯರಾಗಿರುವರು. ವೇಂಕಟೇಶನ ಪೂರ್ಣ ಕೃಪಾಕಟಾಕ್ಷ ಪಡೆದಿರುವುದರಲ್ಲಿ ಸಂದೇಹವಿಲ್ಲ.

ಇವರು ರಚಿಸಿರುವ ಸರ್ವಾಶ್ರಯಸ್ತೋತ್ರ ಹಾಗೂ ಆನಂದಮಯ ಸ್ತೋತ್ರಗಳು ಮುಖ್ಯವಾಗಿ ವಿಷ್ಣು ಸರ್ವೋತ್ತಮ ತತ್ವವನ್ನು ಪ್ರತಿಪಾದಿಸುವ ಕೃತಿಗಳಾಗಿವೆ.

ಇವರು ರಚಿಸಿರುವಂತಹ ಪ್ರಸನ್ನ ಶ್ರೀನಿವಾಸ ಕಲ್ಯಾಣ ಹಾಗೂ ರಾಮಾಯಣದ ಸುಂದರಕಾಂಡಗಳನ್ನು ಅಕ್ಕರೆಯಿಂದ ಪಾರಾಯಣ ಮಾಡಿದ

ವರಿಗೆ ಎಚ್ಚರ ನಿದ್ದೆಗಳಲ್ಲಿ ಅನೇಕ ಅನುಭವಗಳಾಗಿರುವುದುಂಟು. ಕ್ಷಯಾದಿ ಘೋರ ರೋಗಗಳು ಬಗೆ ಬಗೆಯ ವಿಷವಿಪತ್ತುಗಳು ದೂರವಾಗಿರುವ ಅನೇಕ ಸಂದರ್ಭಗಳುಂಟು.

ಪ್ರಸ್ತುತ ಪ್ರಸನ್ನ ಶ್ರೀನಿವಾಸದಾಸಾರ್ಯರಿಂದ ರಚಿತವಾಗಿರುವ "ಪ್ರಸನ್ನ ವಿಜಯದಾಸಾರ್ಯ ಚರಿತ್ರೆ"ಯಲ್ಲಿ ಅನೇಕ ಹರಿದಾಸರುಗಳು ವ್ಯಕ್ತಪಡಿಸಿರುವಂತೆ ಶ್ರೀ ವಿಜಯದಾಸಾರ್ಯರು ಭೃಗು ಮಹರ್ಷಿಗಳ ಅಂಶದವರೆಂದು ತಮ್ಮ ಕೃತಿಯಲ್ಲಿ ಸ್ಪಷ್ಟವಾಗಿ ತಿಳಿಸಿರುತ್ತಾರೆ.

ರಾಯಚೂರು ಜಿಲ್ಲೆಯ ಮಾನ್ವಿ ಪಟ್ಟಣಕ್ಕೆ ೧೦-೧೨ ಕಿ.ಮೀ. ದೂರದಲ್ಲಿರುವ 'ಚೀಕಲಪರವಿ' ಎಂಬ ಗ್ರಾಮದಲ್ಲಿ ವಿಜಯದಾಸರು ಅವತಾರ ಮಾಡಿ, ಬಡತನದ ಬವಣೆಯಲ್ಲಿ ತೊಳಲಾಡಿ ಸಂಸಾರಿಗಳಾಗಿ ತೀರ್ಥಯಾತ್ರೆ, ಪರ್ಯಟನೆಯಿಂದ ಭಗವತ್ ಅನುಗ್ರಹದಿಂದ ಅಪರೋಕ್ಷ ಜ್ಞಾನ ಸಂಪಾದಿಸಿ, ದೀನ ದಲಿತರನ್ನು ಉದ್ಧರಿಸಿ ತತ್ವರಚನೆ ಮಾಡಿ, ಅನಂತರ ಗುಂತಕಲ್ ಬಳಿಯ 'ಚಿಪ್ಪಗಿರಿ' ಯಲ್ಲಿ ಕಾರ್ತೀಕ ಶುದ್ಧ ದಶಮಿಯಂದು ತಮ್ಮ ಸ್ವಸ್ಥಾನ ಸೇರಿದರು. ದಾಸರಾಯರ ಇಷ್ಟು ಕಥೆ ಇನ್ನೂ ವಿಪುಲವಾಗಿ ಹಲವಾರು ಗ್ರಂಥಕರ್ತರಿಂದ ನಮಗೆ ದೊರೆಯುವಂತಹದೆ, ಆದರೆ ಪ್ರಸನ್ನ ಶ್ರೀನಿವಾಸ ದಾಸಾರ್ಯರ ಕೃತಿ ರಚನೆಯೇ ಬೇರೆ ಧಾಟಿಯಲ್ಲಿರುತ್ತದೆ.

ಅವರು ಕಥೆ ಹೇಳುವುದರ ಜೊತೆಗೆ ಆಯಾ ವಿಷಯಗಳಲ್ಲಿನ ಪ್ರಚಲಿತವಿರುವ ಸಂಶಯಗಳನ್ನು ದೂರ ಮಾಡಿ ನಿಜಾಂಶವನ್ನು ನಿಃಸಂಶಯವಾಗಿ ಹೇಳಿರುತ್ತಾರೆ.

ವಿಜಯದಾಸಾರ್ಯರ ತಂದೆ ಶ್ರೀನಿವಾಸ ಆಚಾರ್ಯರು, ತಾಯಿ ಕೂಸಮ್ಮ, ಶ್ರೀನಿವಾಸಾಚಾರ್ಯರು ಅದೇ ಕೂಸಮ್ಮನೆನ್ನುವ ಹೆಸರು ಹೇಳುವ ಮುಂಚೆ ಆ ಸಾಧ್ವೀಮಣಿಯ ಬಗ್ಗೆ ಹೇಳಿರುವ ಮಾತು ತುಂಬಾ ಅನುಪಮ ಸುಂದರವಾಗಿದೆ. "ಕುಸುಮಾಲಯ ಪದ್ಮಾವತಿ ನೆನಪು ಕೊಡುವ ಕುಸುಮ ಕೋಮಲಮುಖಿ ಆದ ಕಾರಣದಿ ಕೂಸಮ್ಮ" ಎಂದಿದ್ದಾರೆ.

ವ್ಯಾಸರಾಜರ ಮುಖ
ಕಮಲದಿಂದುಪದಿಷ್ಟ
ದಾಸರಾಜರು ಪುರಂದರದಾಸ ಆರ್ಯ
ವಸುಧೆಯಲ್ಲಿ ನಾರದರೇ
ಪುರಂದರದಾಸರು ಎನಿಸಿ
ಶ್ರೀಶನ್ನ ಸೇವಿಸುತ
ಭಕ್ತರನ್ನ ಕಾಯ್ದಿಹರು

ಎಂದಿರುವ ಪ್ರಸನ್ನ ಶ್ರೀನಿವಾಸ ದಾಸಾರ್ಯರು ಪುರಂದರದಾಸರೆ ನಾರದರು ಎಂಬುದಾಗಿ ಸ್ಪಷ್ಟಪಡಿಸಿರುತ್ತಾರೆ. ಹಾಗೂ ವಿಜಯದಾಸರು ಪುರಂದರ ದಾಸರ ಶಿಷ್ಯರು ಮತ್ತು ಇವರು ಭೃಗುಮಹಾಮುನಿಯ ಅಂಶವೆಂದಿರುತ್ತಾರೆ.

"ಹರಿ ಸಮೀರರು ಸದಾ ಪ್ರಚುರರಾಗಿಹ
ಪುರಂದರದಾಸಾರ್ಯರ ವರ ಶಿಷ್ಯರೇವೆ
ಧರೆಯಲ್ಲಿ ಪ್ರಖ್ಯಾತ ವಿಜಯದಾಸಾರ್ಯರು
ಸುರವೃಂದ ಮಹಋಷಿಯು
ಭೃಗುಮಹಾಮುನಿಯು"
—ಎಂದು ಅಪ್ಪಣೆ ಕೊಡಿಸಿರುತ್ತಾರೆ.

ನಾರದರ ಪ್ರೇರಣೆಯಿಂದ ಭೃಗುಮಹರ್ಷಿಗಳು ತ್ರಿಮೂರ್ತಿಗಳಲ್ಲಿ ಯಾರು ದೊಡ್ಡವರೆಂದು ತಿಳಿಯಲು ತತ್ವ ನಿರ್ಣಯ ಮಾಡುವುದಕ್ಕಾಗಿ ಕೈಲಾಸ, ಸತ್ಯಲೋಕ ಮತ್ತು ವೈಕುಂಠಲೋಕಗಳಿಗೆ ತೆರಳುತ್ತಾರೆ.

ಸುರನದಿ ತೀರದಲಿ
ಭೂಸುರರು ಋಷಿಗಳು
ಸತ್ರಯಾಗ ಎಂಬಂಥ ಜ್ಞಾನಕರ್ಮ
ಚರಿಪ ಜಿಜ್ಞಾಸದಲಿ ನಾರದರು ಪ್ರೇರಿಸಿ
ಹೊರಟರು ಭೃಗು ಮುನಿಯು ತತ್ವನಿರ್ಣಯಕೆ

ಹರಿಸರ್ವೋತ್ತಮ ತತ್ವವನ್ನು ಪ್ರತಿಪಾದಿಸಿದ ಮೊದಲ ಮಹನೀಯರು ವಿಜಯದಾಸಾರ್ಯರ ಪೂರ್ವಾವತಾರದ ಭೃಗು ಮಹರ್ಷಿಗಳು.

ಶ್ರುತಿ ಸ್ಮೃತಿ ಪುರಾಣೇತಿಹಾಸಾದಿಗಳಲ್ಲಿ
ಅದ್ವಿತೀಯ ಸರ್ವೋತ್ತಮ ಹರಿ ಶ್ರೀಶ
ಪದುಮ ಭವ ರುದ್ರಾದಿ
ಸುರರು ತಾರತಮ್ಯದಲಿ
ಸದಾ ಅಮರರೆಂಬುದನು ಪರೀಕ್ಷೆ ಮಾಡಿದರು

ತಾರತಮ್ಯ ರೀತಿಯಲ್ಲಿ ಹರಿಯೇ ಸರ್ವೋತ್ತಮ, ತದನಂತರ ರಮಾದೇವಿಯರು, ನಂತರ ಬ್ರಹ್ಮದೇವರು, ಸರಸ್ವತಿ ದೇವಿಯರು ಇತ್ಯಾದಿ ಎಂಬುದಾಗಿ ಪ್ರಸನ್ನ ಶ್ರೀನಿವಾಸದಾಸರು ತಿಳಿಸಿರುತ್ತಾರೆ.

ನೇರದಲ್ಲಿ ತಾ ಪೋಗಿ ಅರಿತು ಪೇಳಿದರು
ಹರಿ ಸರ್ವೋತ್ತಮ
ಸಾಕ್ಷಾತ್ ರಮಾದೇವಿ ತದಂತರ
ಸರಸಿಜಾಸನ ವಾಣಿ ರುದ್ರಾದಿ ಸುರರು
ತರತಮದಿ ಅಮರರು ಸಂಶಯವಿಲ್ಲ
ಶ್ರೀ ವಿಜಯದಾಸಾರ್ಯರ
ಶಿಷ್ಯರೇ ಶ್ರೀ ಗೋಪಾಲದಾಸರು

ಇವರು ಗಣೇಶನ ಅಂಶ ಎಂದು ಪ್ರಸನ್ನ ಶ್ರೀನಿವಾಸದಾಸರು ತಿಳಿಸಿರುತ್ತಾರೆ.

ವಿಜಯರಾಯರ ಶಿಷ್ಯ
ಸೂರಿಗಳೊಳ್ ಪ್ರವರನು
ಧೂರ್ಜಟಿ ಉಮಾಸುತನು ಕ್ಷಿಪ್ರಸಾದ
ಗಜಮುಖನೆ ಗೋಪಾಲದಾಸಾರ್ಯರಾಗಿ
ಪ್ರಜ್ವಲಿಸುತಿಹ ನಮೋ ಗುರುವರ್ಯ ಶರಣು

ಪ್ರಸನ್ನ ಶ್ರೀನಿವಾಸದಾಸರು ತಮ್ಮ ಗುರುಗಳಾಗಿರುವ ಗೋಪಾಲದಾಸಾರ್ಯರನ್ನು ಸ್ಮರಿಸಿ ನಮಸ್ಕರಿಸಿದ್ದಾರೆ.

ಪುರಂದರದಾಸಾರ್ಯರು ವಿಜಯರಾಯರಲ್ಲಿ
ಇರುವರು ಒಂದಂಶದಿಂದ ಜ್ವಲಿಸುತ್ತ
ಬರೆಸಿಹರು ಇಪ್ಪತ್ತು ಮೇಲೈದುಸಾವಿರ
ಶ್ರೀ ವರನ ಸಂಸ್ತುತಿ ತತ್ವ ಕವಿತೆಗಳ

ವಿಜಯದಾಸಾರ್ಯರು ಇಪ್ಪತ್ತೈದು ಸಾವಿರ ಪದಗಳನ್ನು ರಚಿಸಿರುವರೆಂದು ನಿರ್ಣಯಿಸಿದ್ದಾರೆ ದಾಸಾರ್ಯರು. ಹಾಗೂ ಇವರು ಮಧ್ವಪತಿಗಳಾಗಿದ್ದರು ಎಂದಿದ್ದಾರೆ.

ಪುರಂದರಾರ್ಯರ ಮನೆಯಲ್ಲಿ ಗೋವತ್ಸ
ತರುವಾಯ ಸುಕುಮಾರ ಮಧ್ವಪತಿಯಾಗಿ
ಸರಿದ್ವರ ಶ್ರೀ ತುಂಗಭದ್ರಾ ತೀರದಿ ಪುನಃ
ಅರಳಿ ನೃಸಿಂಹಕ್ಷೇತ್ರದಲಿ ತೋರಿಹರು

"ಅರಳಿ ನೃಸಿಂಹ ಕ್ಷೇತ್ರ"ದ ಮತ್ತೊಂದು ರೂಢಿಯ ಹೆಸರು "ಚೀಕಲಪರವಿ" ಎಂದು. ವಿಜಯಾರ್ಯರು ಅಲ್ಲಿ ಅವತಾರ ಮಾಡಿದರೆಂದು, ಅವರ ಮೊದಲ ಹೆಸರು ದಾಸಪ್ಪ ಎಂಬುದಾಗಿ ತಿಳಿಸಿರುತ್ತಾರೆ.

ಪತಿವ್ರತಾ ಶಿರೋಮಣಿ ಕೂಸಮ್ಮನ ಗರ್ಭ
ಅಬ್ಧಿಯಿಂ ಹುಟ್ಟಿತು ಉತ್ತಮ ರತ್ನ
ಹತ್ತು ದಿಕ್ಕಲು ಪ್ರಕಾಶಿಸುವ ಕೀರ್ತಿಮಾನ್
ಪುತ್ರರತ್ನನು ಬೆಳೆದ ದಾಸಪ್ಪನಾಮಾ

ವಿಜಯರಾಯರು ಕಾಲ್ನಡಿಗೆಯಲ್ಲೇ ಕಾಶಿಗೆ ಮೂರುಸಲ ಹೋಗಿದ್ದು, ಕಾಶಿ ವಿಶ್ವನಾಥನ ದರ್ಶನ ಮಾಡಿರುವ ಪುಣ್ಯಾತ್ಮರು, ಭಾಗ್ಯಶಾಲಿಗಳು.

ದಾಸಪ್ಪನಾಮದಲೂ ವಿಜಯರಾಯ
ರೆನಿಸಿಯೂ

ದೇಶ ದೇಶದಿ ಹರಿಕ್ಷೇತ್ರ ಪೋಗಿಹರು
ಕಾಶೀಗೆ ಮೂರು ಸಲ ಪೋಗಿ ಬಂದಿರುವರು
ಕಾಶಿ ಬದರಿ ನಮಗೆ ಇವರ ಸಂಸ್ಮರಣೆ

ಇವರ ಪತ್ನಿ ಅರಳಿಯಮ್ಮ ಪತಿವ್ರತಾಶಿರೋಮಣಿ, ಸಾಧ್ವಿ-

ಗುಣರೂಪವಂತಳು ವಧು ಅರಳಿಯಮ್ಮ
ಘನ ಮಹಾಪತಿವ್ರತಾ ಶಿರೋಮಣಿಯು ಈಕೆ
ತನ್ನ ಪತಿ ಸೇವೆಯ ಪೂರ್ಣ ಭಕ್ತಿಯಲಿ
ಅನವರತ ಮಾಡುವ ಸೌಭಾಗ್ಯವಂತೆ

ವಿಜಯರಾಯರು ತಿರುಪತಿಗೆ ಹೋಗಿದ್ದು ಸ್ವಾಮಿಯ ದಿವ್ಯ ಮಂಗಳ ಚರಣ ದರ್ಶನದ ನಂತರ ಆತನ ಸೂಚನೆಯಂತೆ ಮತ್ತೆ ಕಾಶಿಗೆ ಹೋದರು. ಅಲ್ಲಿ ಪುರಂದರದಾಸಾರ್ಯರಿಂದ ಅಂಕಿತ ದೊರೆತ ಬಗೆ ಪ್ರಸನ್ನ ಶ್ರೀನಿವಾಸದಾಸರು ಬಲು ಸೊಗಸಾಗಿ ವಿವರಣೆ ಕೊಟ್ಟಿರುತ್ತಾರೆ.

ಸೌದಾಮಿನಿಗಮಿತ ರಂಜಿಸುವ ಜ್ಯೋತಿಯು
ಬದರೀಶನಿಂ ಪುರಂದರ ದಾಸರ ದ್ವಾರ
ಬಂದು ನೆಲಸಿತು ದಾಸಪ್ಪನ ಜಿಹ್ವೆಯ
ತುದಿಯಲ್ಲಿ ವಿಜಯಾಖ್ಯಸುಶುಭ ನಾಮ

—ಎಂದಿದ್ದಾರೆ.

ರಾಜೀವ ಜಾಂಡದೊರೆ ರಾಜೀವಾಲಯ ಪತಿ
ವಿಜಯ ವಿಠ್ಠಲ ನಿಮ್ಮ ಹೃತ್‌ರಾಜೀವದಲಿ
ಪ್ರಜ್ವಲಿಸುತಿಹ ಸರ್ವತೋಮುಖನೆಂದು
ನೈಜವಾತ್ಸಲ್ಯದಿ ಪೇಳಿದರು ಗುರುವು

ಅವರಿಗೆ ಅಪರೋಕ್ಷಜ್ಞಾನದ ಅನುಗ್ರಹವಾಯಿತು ಎಂದಿದ್ದಾರೆ.

ಸುರರು ಭೃಗು ದಾಸಪ್ಪ ಜಾತಾಪರೋಕ್ಷಿಗೆ
ಪುರಂದರದಾಸನಾರದರೊಲಿದ ಮೇಲೆ
ಇರುತ್ತಿದ್ದ ಅಪರೋಕ್ಷ
ಅಣಿಮಾದಿಮಹಿಮೆಯು
ಸುಪ್ರಕಟವಾದವು ಶ್ರೀಶನ ದಯದಿ

ಇವು ದ್ವಿತೀಯಾಧ್ಯಾಯದವರೆಗೂ ಇರುವ ಮುಖ್ಯಾಂಶ.

ವಿಜಯರಾಯರಿಂದ ಅಂಕಿತ ಪಡೆದ ಶಿಷ್ಯರುಗಳು-

ಸಾಧುವರ್ಯ ತಮ್ಮನಿಗೆ
ಹಯವದ ನಾಂಕಿತ ನಾಮ
ಉತ್ತನೂರು ಭಾಗಣ್ಣ
ರಾಯರ್ಗೆ ಗೋಪಾಲ
ಆದವಾಣಿ ತಿಮ್ಮಣ್ಣರ್ಗೆ ವೇಣುಗೋಪಾಲ
ಆದವಾಣಿಯವರ ದ್ವಾರಾ ವ್ಯಾಸ ಸುಬ್ಬಣ್ಣರ್ಗೆ

ಕಲ್ಲೂರು ಸುಬ್ಬಣ್ಣಾಚಾರ್ಯರು ವಿಜಯದಾಸರ ಮಹಿಮೆ ಅರಿಯದೆ "ಪ್ರಾಕೃತ ಹಾಡುವವನಿಗೆ ಪೂಜೆಯೇ" ಎಂದು ಅಪಹಾಸ್ಯ ಮಾಡುತ್ತಾರೆ. ದಾಸರ ಅನುಗ್ರಹದಿಂದ ಒಬ್ಬ ಪರಿಚಾರಕ ಅಣು ವ್ಯಾಖ್ಯಾನ ಸುಧಾ, ನ್ಯಾಯರತ್ನಾವಳೀ ಇನ್ನು ಬಹು ಗ್ರಂಥಗಳ ಅನುಮಾನ ಪರಿಹಾರ ಮಾಡುತ್ತಾನೆ. ಸುಬ್ಬಣ್ಣಾಚಾರ್ಯರಿಗೆ ಜ್ಞಾನೋದಯವಾಗುತ್ತದೆ. ಅಪರಾಧ ಕ್ಷಮಿಸೆಂದು ದಾಸಾರ್ಯರಲ್ಲಿ ಮೊರೆ ಹೋಗುತ್ತಾನೆ. "ಸೌಭಾಗ್ಯಪ್ರದ ಸುಧಾಮಂಗಳವ ಪೂರೈಸು ಶುಭೋದಯವು ನಿನಗೆಂದು" ಹೇಳಿ ಔದಾರ್ಯ ತೋರುತ್ತಾರೆ. ಇದು ತೃತೀಯ ಅಧ್ಯಾಯದ ವಿವರಣೆ.

ನಾಲ್ಕನೇ ಅಧ್ಯಾಯದಲ್ಲಿ ಬಾಗಿ ಕೇಶವರಾಯನ ಮಗನನ್ನು ಬದುಕಿಸಿದ್ದು, ಹಾಗೂ ಒಬ್ಬ ಬ್ರಾಹ್ಮಣನಿಗೆ ಒಂದೊದಗಿದ ಅಪಮೃತ್ಯುವನ್ನು ವರಾಹಭಿಷಕ್ ನರಹರಿಯ ಮಂತ್ರಜಪಿಸಿ, ತಮ್ಮ ಆಯುಷ್ಯದಲ್ಲಿ ಮೂರುವರ್ಷ ಕೊಟ್ಟು ಬದುಕಿಸಿದ ಮಹಾನುಭಾವರು.

ಕರುಣಾ ಸಮುದ್ರರು ಭೂತದಯಾಪರರು
ಎರೆದರು, ತಮ್ಮ ಆಯುಷ್ಯದಿ ಮೂರು ವರುಷ
ವರಾಹ ಭಿಷಕ್ ನರಹರಿಯ ಜಪವನ್ನು ಗೈದು
ನರಸಿಂಹನ ಸ್ತುತಿಸಿ ಬದುಕಿಸಿದರು ಯುವಕನ್ನ

ಉದ್ದಾಮ ಪಂಡಿತರಾಗಿದ್ದ ಶ್ರೀನಿವಾಸಾಚಾರ್ಯರನ್ನು ಉದ್ಧಾರಮಾಡಿರುವರು. (ಮುಂದೆ ಇವರೇ ಶ್ರೀ ಜಗನ್ನಾಥದಾಸರು ಆದರು)

ಶ್ರೀನಿವಾಸಾಚಾರ್ಯರು
ಗೋಪಾಲದಾಸಾರ್ಯರ ದಯದಿ
ಪುನರಾರೋಗ್ಯ ಆಯುಷ್ಯವು ಹೊಂದಿ
ಶ್ರೀನಿಧಿ ಭೀಮರಥಿ ತೀರಸ್ಥ ವಿಠ್ಠಲನನ್ನು
ಸನ್ನಮಿಸಿ ಸಂಸ್ತುತಿಸಿ
ಖ್ಯಾತರಾದರು ಜಗನ್ನಾಥದಾಸರೆಂದು

ಮೋಹನದಾಸಾರ್ಯರಿಗೆ ಮೋಹನ ವಿಠ್ಠಲ ಎಂಬ ಅಂಕಿತೋಪದೇಶ ಮಾಡಿ ಅವರಿಗೆ ಬಂದಿದ್ದಂತಹ ಅಪಮೃತ್ಯುವನ್ನು ಪರಿಹರಿಸಿ ಉದ್ಧಾರ ಮಾಡಿದ ಗುರುಗಳೆಂದು ಪ್ರಸನ್ನ ಶ್ರೀನಿವಾಸದಾಸಾರ್ಯರು ತಿಳಿಸಿರುತ್ತಾರೆ.

ಇವು ನಾಲ್ಕನೇ ಅಧ್ಯಾಯದ ಮುಖ್ಯಾಂಶ.

ಒಬ್ಬ ಬಾಲವಿಧವೆ, ನೀಚ ವೃತ್ತಿಯವಳೆಂದು ಅನಾದರಣೆಗೆ ಒಳಗಾಗಿದ್ದವಳ ಮನೆಗೆ ದಾಸರು ಹೋಗಿ ಶ್ರೀ ವಿಜಯವಿಠ್ಠಲನನ್ನು ಪೂಜಿಸಿ, ಅವಳಿಗೆ ನೈವೇದ್ಯವನ್ನಿತ್ತು ತಾವೂ ಉಂಡರು. ತೃಪ್ತಿಯಾದ ತರುವಾರು ಆ ಸ್ತ್ರೀಯು ದೇಹ ತ್ಯಾಗ ಮಾಡುತ್ತಾಳೆ. ಅವಳ ಅಂತ್ಯ ಸಂಸ್ಕಾರ ದಾಸರಾಯರು ಮಾಡಿಸುತ್ತಾರೆ. ಅವರಿಂದಾಗಿ ಎಲ್ಲರಿಂದಲೂ ಮೇಲಾಗಿ ಶ್ರೀಮಠದ ಶ್ರೀಗಳಿಂದ ಆಕ್ಷೇಪಣೆಗೆ ಒಳಗಾಗುತ್ತಾರೆ. ಶ್ರೀಗಳು ದಾಸಾರ್ಯರನ್ನು ಕರೆಯಿಸಿ ವಿವರಣೆ ಕೇಳುತ್ತಾರೆ. ನಂತರ ಶ್ರೀಗಳಿಗೆ ಅಪಾರ ಗೌರವ ದಾಸರಲ್ಲಿ ಉಂಟಾಗುತ್ತದೆ.

ದಾಸವರ್ಯರು ಹೇಳಿದರು ಆ ಬಾಲೆಯು
ಸುಮನಸ ವೃಂದದಿ ಓರ್ವಳು ಪೂರ್ವ
ವಸುಧೆಯಲಿ ಪುಟ್ಟುವೆನು ಎನ್ನನುದ್ಧರಿಸಿರಿ
ವಾತ್ಸಲ್ಯದಿ ಎಂದು ಬೇಡಿದಳೆಂದು

ತಿರುಪತಿಯಲ್ಲಿ ದಾಸಾರ್ಯರು ನಡೆಸಿದ ಪವಾಡ ಎಲ್ಲರಿಗೂ ವೇದ್ಯವಾಗಿರುವಂತಹದೆ.

ತಿರುಪತಿಯಲ್ಲಿ ಶ್ರೀನಿವಾಸನ ರಥ
ದಾರಿಯಲ್ಲಿ ನಿಲ್ಲಲು ವಿಜಯದಾಸಾರ್ಯರು
ಹರಿತತ್ವ ಮಹಿಮೆಯ ಕವನರೂಪದಿ ಸ್ತುತಿಸೆ
ಗರುಡ ಗಮನನು ರಥದಿ ಸರಸರನೆ ಬಂದ

ದಾಸಾರ್ಯರು ಚಿಪ್ಪಗಿರಿಯಲ್ಲಿ ಶ್ರೀನಿವಾಸನನ್ನು ಸೇವಿಸುತ ಕಾರ್ತೀಕ ಶುದ್ಧ ದಶಮಿಯಂದು ಶ್ರೀಹರಿಪಾದ ಸೇರಿದರು ಎಂದು ದಾಸಾರ್ಯರು ಬರೆಯುತ್ತಾರೆ.

ದಾಸಾರ್ಯರ ಈ ಕಥೆ ಶ್ರವಣ ಮಾಡಿದವರಿಗೆ ಫಲಶ್ರುತಿ ಹೀಗೆ ಬರೆಯುತ್ತಾರೆ.

ವಿಜಯರಾಯರ ನೆನೆದರೆ
ಆಯುಷ್ಯ ಆರೋಗ್ಯ ಶ್ರೀ
ನಿಜಭಕ್ತಿಜ್ಞಾನವು ವಿಜಯ ಎಲ್ಲೆಲ್ಲೂ
ವಿಜಯ ದಾಸಾಂತಸ್ಥ ಮದ್ವಾಂತರ್ಗತ ಶ್ರೀಶ
ವಿಜಯಸಾರಥಿ ಶ್ರೀನಿವಾಸನು ಈವ

ಎಂಬುದನ್ನು ವಿದ್ವತ್‌ಜನರಲ್ಲಿ ದಾಸಾರ್ಯರು ನಿವೇದಿಸುತ್ತಾ ಪಂಚಮ ಅಧ್ಯಾಯವನ್ನು ಸಂಪನ್ನಗೊಳಿಸುತ್ತಾರೆ.

(ಸಾಧಾರ)



# ದಾರ್ಶನಿಕ ಮಹಾನುಭಾವ - ಶ್ರೀ ಯಾಜ್ಞವಲ್ಕ್ಯರು

---ಜಿ. ಶ್ರೀಧರ್.

ಭವ್ಯ ಭಾರತ ವಿಶ್ವದಲ್ಲಿಯೇ ತನ್ನ ಅತ್ಯಮೂಲ್ಯವಾದ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಭಂಡಾರದಿಂದ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಈ ಹಿರಿಮೆಗೆ ಅನೇಕ ಋಷಿಗಳು, ಮಂತ್ರ ದ್ರಷ್ಟಾರರು, ಹಾಗೂ ದಾರ್ಶನಿಕರು ಕಾರಣವಾಗಿದ್ದಾರೆ. ಇಂತಹವರಲ್ಲಿ ಯಾಜ್ಞವಲ್ಕ್ಯರು ಧ್ರುವತಾರೆಯಾಗಿದ್ದು, ವೇದಕಾಲದ ಆದರ್ಶ ಕ್ರಾಂತಿಕಾರಿ ಸಾಧಕರಾಗಿದ್ದಾರೆ.

ಪಾಂಚಾಲದ ಪ್ರಾಂತದಲ್ಲಿ ಅನ್ನದಾನದ ಪ್ರಖ್ಯಾತಿಯಾಗಿ ಅದರ ಹಿರಿಮೆಯನ್ನು ಹೊಂದಿದ್ದ ಬ್ರಹ್ಮರಾತ - ಸುನಂದಾದೇವಿಯರ ಪುತ್ರರಾಗಿ ಜನಿಸಿದರು - ಯಾಜ್ಞವಲ್ಕ್ಯರು. ಇವರು ಬಾಲ್ಯದಿಂದಲೂ ಪ್ರತಿಭಾವಂತರು. ಅನ್ನದಾನದ ವಂಶವಾಗಿದ್ದ, ಇವರ ಕುಟುಂಬವನ್ನು ವಾಜಸನೇಯ, ವಾಜಸನಿ ಎಂಬ ಹೆಸರಿನಲ್ಲಿ ಕರೆಯಲಾಗುತಿತ್ತು. ವರ್ಧಮಾನ ನಗರದ ಶಕಲ ಎಂಬ ಋಷಿ ಪುತ್ರಿಯಾದ ಸುನಂದಾ - ಲಂಬಾಯನೀ ಇವರೇ ಯಾಜ್ಞವಲ್ಕ್ಯರ ಜನನಿ. ಇವರ ಸೋದರಮಾವ ವೈಶಾಂಪಯನರು.

ವೇದ ದ್ರಷ್ಟಾರಾದ ವೈಶಾಂಪಯನರಲ್ಲಿ ಯಾಜ್ಞವಲ್ಕ್ಯರು ವಿದ್ಯಾಭ್ಯಾಸ ಪ್ರಾರಂಭಮಾಡಿದರು. ಇಲ್ಲಿಂದಲೇ ಯಾಜ್ಞವಲ್ಕ್ಯರ ದಾರ್ಶನಿಕ ಜೀವನದ ಪರ್ವಕಾಲ ಪ್ರಾರಂಭವಾಯಿತು. ವೈಶಾಂಪಯನರು ತಮ್ಮ ಗುರುಕುಲವನ್ನು ವರ್ಧಮಾನಪುರದ "ಸುಪ್ರಿಯಾ" ರಾಜನ ಆಶ್ರಯದಲ್ಲಿ ನಡೆಸುತ್ತಿದ್ದರು. ಈ ರಾಜನು ತನ್ನ ಪಾಪ - ಕರ್ಮದಿಂದ ಭಯಂಕರ ರೋಗಕ್ಕೆ ಒಳಗಾಗಿದ್ದನು. ರಾಜವೈದ್ಯರ ಚಿಕಿತ್ಸೆಗಳು ವಿಫಲವಾದ ನಂತರ ಕುಲಾಚಾರ್ಯರಾದ ವೈಶಾಂಪಯನರನ್ನು ಆಶ್ರಯಿಸಿ, ಹೋಮ - ಶಾಂತಿಗಳ ಮೂಲಕವಾಗಿ ತನ್ನ ರೋಗವನ್ನು ಗುಣಪಡಿಸುವಂತೆ ಕೋರಿದನು. ಕರುಣಾಳುಗಳಾದ ಆಚಾರ್ಯರು ಇದಕ್ಕೆ ಸಮ್ಮತಿಸಿ, ಹೋಮ-ಹವನ ಪ್ರಾರಂಭಿಸಿದರು. ದಿನಕ್ಕೊಬ್ಬರಂತೆ ಗುರುಕುಲದ ವಿದ್ಯಾರ್ಥಿಗಳು ರಾಜನಿಗೆ ತೀರ್ಥ ಪ್ರಸಾದಗಳನ್ನು ಕೊಟ್ಟು ಬರುತ್ತಿದ್ದರು.

ಹಲವಾರು ದಿನಗಳು ಕಳೆದವು. ಹೋಮ ಶಾಂತಿಯ ಪ್ರಸಾದವನ್ನು ಸೇವಿಸಿದರೂ ರಾಜನ ಭಯಂಕರ ರೋಗ ವಾಸಿಯಾಗಲಿಲ್ಲ. ಪ್ರಸಾದದ ಬಗ್ಗೆ ರಾಜನು ನಿರ್ಲಕ್ಷ್ಯತೋರಲು ಪ್ರಾರಂಭಿಸಿದನು. ಈ ಸಂದರ್ಭದಲ್ಲಿಯೇ ವಿದ್ಯಾರ್ಥಿಯಾದ ಯಾಜ್ಞವಲ್ಕ್ಯರ ಸರದಿ ಬಂತು. ಎಂದಿನಂತೆ ರಾಜನು ಪ್ರಸಾದವನ್ನು ತನ್ನ ಸಿಂಹಾಸನದ ಮೇಲೆ ಇರಿಸಿ ಹೋಗುವಂತೆ ಯಾಜ್ಞವಲ್ಕ್ಯರಿಗೆ ಸೂಚಿಸಿದನು. ರಾಜನ ಆದೇಶದಂತೆ ಪ್ರಸಾದವನ್ನು ಮರದ ಸಿಂಹಾಸನದ ಮೇಲೆ ಇರಿಸಿ, ಯಾಜ್ಞವಲ್ಕ್ಯರು ಹಿಂದಿರುಗಿದರು. ಪ್ರಸಾದ ಹಾಗೂ ಯಾಜ್ಞವಲ್ಕ್ಯರ ತಪಃ ಶ್ರದ್ಧೆಯಿಂದ ಅಲ್ಲಿ ಪವಾಡವೇ ಜರುಗಿತು. ಒಣಮರದ ಸಿಂಹಾಸನ, ಮಹಾವೃಕ್ಷವಾಯಿತು. ರಾಜ ಸುಪ್ರಿಯನಿಗೆ ಅಹಂಕಾರದ ಅರಿವಾಗಿ, ಭಯದಿಂದ ಗುರುಕುಲಕ್ಕೆ ಬಂದು, ವೈಶಾಂಪಯನರಲ್ಲಿ ವಿಷಯ ತಿಳಿಸಿ, ಮತ್ತೊಮ್ಮೆ ಯಾಜ್ಞವಲ್ಕ್ಯರಿಂದ ಪ್ರಸಾದವನ್ನು ಅನುಗ್ರಹಿಸುವಂತೆ ಕೋರಿದರು. ವೈಶಾಂಪಯನರು ಯಾಜ್ಞವಲ್ಕ್ಯರಿಗೆ ರಾಜನನ್ನು ಆಶೀರ್ವದಿಸಲು ಅಗ್ರಹಿಸಿದರು. ಅಹಂಕಾರಿಯಾದ ರಾಜನಿಗೆ ಅವನ ಪಾಪ - ಕರ್ಮದ ಚಿಂತನೆಯಾಗುವರೆಗೂ ಸದ್ಬುದ್ಧಿ ದೊರಕಲಾರದು. ಅಲ್ಲಿಯವರೆಗೂ ಅವನನ್ನು ಆಶೀರ್ವದಿಸಿ ಉಪಯೋಗವಿಲ್ಲ ಎಂಬ ಮಾತನ್ನು ತಿಳಿಸಿದರು. ವೈಶಾಂಪಯನ - ಯಾಜ್ಞವಲ್ಕ್ಯರಲ್ಲಿ ವಿರೋಧಕ್ಕೆಂದು ಈ ಘಟನೆ ದೇವತೆಗಳು ಹೂಡಿದ್ದ ಕಾರ್ಯ-ತಂತ್ರವಾಗಿತ್ತು.

ವೈಶಾಂಪಯನರು ಮೇರು ಪರ್ವತದ ಋಷಿ ಸಭೆಗೆ ಹಾಜರಾಗದ ಕಾರಣ, ನಿಮಿತ್ತ ಮಾತ್ರವಾಗಿ ಅವರಿಗೆ ಬ್ರಹ್ಮಹತ್ಯಾದೋಷ ಸಂಭವಿಸಿತು. ಅದರಿಂದ ವಿಮುಕ್ತರಾಗಲು ತಮ್ಮ ಶಿಷ್ಯರಿಂದ ಯಜ್ಞ-ಯಾಗಾದಿಗಳನ್ನು ಪ್ರಾರಂಭಿಸಿದರು. ಈಗಾಗಲೇ ದೇವತೆಗಳು ಹೂಡಿದ್ದ ಕಾರ್ಯತಂತ್ರಕ್ಕೆ ಸರಸ್ವತೀ ದೇವಿಯು ಸಹಕರಿಸಿದ್ದರಿಂದ, ಯಾಜ್ಞವಲ್ಕ್ಯರು ತಮ್ಮ ಗುರು ಬಂಧುವಾದ ವೈಶಾಂಪಯನರ ಬ್ರಹ್ಮಹತ್ಯೆ ದೋಷವನ್ನು ತಾವೊಬ್ಬರೆ ಮುಕ್ತಗೊಳಿಸುವುದಾಗಿ ತಿಳಿಸಿದರು. ಈ ಮಾತು ವೈಶಾಂಪಯನರಿಗೆ ಭರಿಸಲಾರದ ಕೋಪವನ್ನು ತರಿಸಿ, ವಿಶ್ವದ ಆಧ್ಯಾತ್ಮಿಕ ಜಗತ್ತಿಗೆ ಸಹಾಯ ಮಾಡಿತು. ತಮ್ಮ ಶಿಷ್ಯನ ಮೇಲೆ ಹುಸಿಕೋಪವನ್ನು ವೈಶಾಂಪಯನರು ಪ್ರದರ್ಶಿಸಿದರು.

ಯಾಜ್ಞವಲ್ಕ್ಯರು ವೈಶಾಂಪಯನರಿಂದ ಕಲಿತ ಯಜುರ್ವೇದವನ್ನು ವಮನ ಮಾಡುವ ಮೂಲಕ ಕೆಂಡದ ರೂಪದಲ್ಲಿ ತ್ಯಜಿಸಿದರು. ವೈಶಾಂಪಯನರ ಇತರ ಶಿಷ್ಯರು ತಿತ್ತಿರಿ ಪಕ್ಷಿ ರೂಪದಲ್ಲಿ ಇದನ್ನು ಭಕ್ಷಿಸಿ, ರಕ್ಷಿಸಿದರು. ಅದು "ತೈತ್ತಿರೀಯ ಸಂಹಿತೆ" ಎಂದೇ ಪ್ರಖ್ಯಾತವಾಯಿತು.

ವೈಶಾಂಪಯನರ ಬಳಿ ಯಜುರ್ವೇದವನ್ನು ಕಲಿಯುತ್ತಿದ್ದಾಗಲೇ, ಯಾಜ್ಞವಲ್ಕ್ಯರು ಪೈಲಮುನಿಗಳ ಶಿಷ್ಯರಾದ ಭಾಷ್ಕಲರಿಂದ ಋಗ್ವೇದವನ್ನು, ಹಿರಣ್ಯನಾಭರಿಂದ ಸಾಮವೇದವನ್ನು, ಅರುಣಿ ಮುನಿಗಳಿಂದ ಅಥರ್ವಣವೇದವನ್ನು ಹಾಗೂ ಉದ್ದಾಲಕ ಮುನಿಗಳಿಂದ ವೈದಿಕ ಧರ್ಮದ ವಿಚಾರಗಳನ್ನು ಅಭ್ಯಸಿಸಿದ್ದರು. ವೇದಮಾತೆಯಾದ ಗಾಯತ್ರಿ ದೇವಿಯನ್ನು ಆರಾಧಿಸಿದ, ಯಾಜ್ಞವಲ್ಕ್ಯರಿಗೆ ಭಗವಾನ್ ನಾರಾಯಣನಿಂದ ಸಿದ್ಧವಾದ ಆಯಾತಯಾಮ ವೇದವು ಸೂರ್ಯನಾರಾಯಣನಲ್ಲಿ ಇವೆ ಎಂದು ತಿಳಿದು ಬಂತು. ತಡಮಾಡದೆ ಶ್ರೀ ಸೂರ್ಯ ಆರಾಧನೆಯನ್ನು ಯಾಜ್ಞವಲ್ಕ್ಯರು ಆರಂಭಿಸಿದರು.

ದೇವತೆಗಳ ಕಾರ್ಯತಂತ್ರ ಇದರಿಂದ ಪೂರ್ಣ ಫಲಿಸಿತು. ಯಾಜ್ಞವಲ್ಕ್ಯರ ತಪಃಶಕ್ತಿಗೆ ಮೆಚ್ಚಿದ ಸೂರ್ಯದೇವರು - ಆಯಾತಯಾಮವಾದ ವೇದವನ್ನು ಅನುಗ್ರಹಿಸಿದರು. ಸೂರ್ಯನಿಂದ ದೊರಕಿದ ಈ ವೇದವೇ "ಶುಕ್ಲಯಜುರ್ವೇದ" ಎಂದು ಪ್ರಸಿದ್ಧಿಗೆ ಬಂದಿದೆ.

ಕತಮಹರ್ಷಿ ಕನ್ಯೆಯಾದ ಕಾತ್ಯಾಯನಿ ಮತ್ತು ಮೈತ್ರೇಯಿ, ಯಾಜ್ಞವಲ್ಕ್ಯರ ಪತ್ನಿಯರು. ವೇದ ಸಂಪ್ರದಾಯದಲ್ಲಿ ಸ್ತ್ರೀಯರಿಗೆ ಅಪೂರ್ವ ಸ್ಥಾನ ನೀಡಿದ ಕೀರ್ತಿ ಯಾಜ್ಞವಲ್ಕ್ಯರದು. ಕಣ್ವ, ಮಾಧ್ಯಂದಿನ, ಗಾಲವ, ಜಾಬಾಲಿ ಋಷಿಗಳು ಇವರ ಶಿಷ್ಯರಾದರು.

ಮಿಥಿಲಾ ರಾಜ್ಯದ ಆಧ್ಯಾತ್ಮಿಕ ಭಂಡಾರಿ ಜನಕನ ಆಸ್ಥಾನದಲ್ಲಿ ಯಾಜ್ಞವಲ್ಕ್ಯರು ಬ್ರಹ್ಮರ್ಷಿಗಳಾಗಿ ಹೆಸರು ಪಡೆದರು. ಗಾರ್ಗಿ ಎಂಬ ಬ್ರಹ್ಮವಾದಿನಿಯು ಈ ಸಂದರ್ಭದಲ್ಲಿ ಹಾಜರಿದ್ದು, ಯಾಜ್ಞವಲ್ಕ್ಯರ ಸರ್ವಜ್ಞ ಆಧ್ಯಾತ್ಮಿಕತೆಯನ್ನು ಸಭೆಗೆ ಸಾದರಪಡಿಸುತ್ತಾಳೆ.

ದಾರ್ಶನಿಕತೆಯ ಮಹಾನುಭಾವರಾದ ಯಾಜ್ಞವಲ್ಕ್ಯರು ಸಂಪಾದಿಸಿದ ಶುಕ್ಲಯಜುರ್ವೇದದಲ್ಲಿ ಈಶಾವಾಸ್ಯ ಉಪನಿಷತ್ತು ಇರುತ್ತದೆ. ಇದು ಈ ಆಧ್ಯಾತ್ಮಿಕ ಜಗತ್ತಿನ ಜೀವಾಳವಾಗಿದೆ. ಶ್ರೀಮದಾಚಾರ್ಯರಿಂದ ಈ ಉಪನಿಷತ್ತಿಗೆ ಭಾಷ್ಯಗಳು ಬರೆಯಲ್ಪಟ್ಟಿವೆ. ಅಣು ಸಮರದ ಜಗತ್ತಿನಲ್ಲಿ ತಂಪು ನೀಡುವ ಈ ಉಪನಿಷತ್ತು ಚಿರಸ್ಥಾಯಿ.

# ವಾರ್ತಾಲಹರಿ

## ತಿರುಮಲೆಯಲ್ಲಿ ರಾಷ್ಟ್ರಪತಿ

ಭಾರತದ ರಾಷ್ಟ್ರಪತಿ ಡಾ|| ಶಂಕರದಯಾಳ ಶರ್ಮ ಅವರು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. ರಾಷ್ಟ್ರಪತಿ ದಂಪತಿಗಳು ಸೋಮವಾರ 9-10-95 ರಂದು ಬೆಳಗ್ಗೆ ಸುಪ್ರಭಾತ, ತೋಮಾಲೆ, ಅರ್ಚನೆ ಸೇವೆಗಳಲ್ಲಿ ಪಾಲುಗೊಂಡರು. ಅವರನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಸ್ಪೆಷಲ್ ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್ ಮೊದಲಾದವರು ಸ್ವಾಗತಿಸಿದರು.

ಸ್ವಾಮಿಯನ್ನು ಸೇವಿಸಿದ ನಂತರ ರಾಷ್ಟ್ರಪತಿಗಳು ತಿರುಚಾನೂರಿಗೆ ಆಗಮಿಸಿ ಅಲ್ಲಿನ ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಅಮ್ಮನವರನ್ನು ಆರಾಧಿಸಿದರು. ಆಲಯ ಮರ್ಯಾದೆಗಳೊಂದಿಗೆ ಅವರನ್ನು ದೇವಾದಾಯ ಇಲಾಖಾ ಮಂತ್ರಿ ಸಿಂಹಾದ್ರಿ ಸತ್ಯನಾರಾಯಣ, ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್ ಮೊದಲಾದವರು ಸ್ವಾಗತಿಸಿದರು.

ಈ ಮುನ್ನ ಅಕ್ಟೋಬರ್ ಎಂಟರಂದು ರಾಷ್ಟ್ರಪತಿಗಳು ತಿರುಮಲೆಯಲ್ಲಿನ ಧರ್ಮಗಿರಿ ಪ್ರಾಂತ್ಯದ ತಿ.ತಿ.ದೇ. ವೇದ ವಿಜ್ಞಾನ ಪೀಠದಲ್ಲಿ ವಿದ್ಯೆಯನ್ನು ಪಡೆದ ಎಂಟುಮಂದಿಗೆ ಪ್ರಮಾಣ ಪತ್ರಗಳನ್ನು ನೀಡಿದರು. ತಿರುಮಲೆಯ ಶ್ರೀ ಪದ್ಮಾವತೀ ಅತಿಥಿ ಗೃಹದಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ, ವೇದ ವಿದ್ಯಾರ್ಥಿಗಳಿಗೆ ಶಾಲು ಹೊದಿಸಿ, ಮೆಲ್ಲಾತ್ ಹಾಸಿ ಸ್ವಾಮಿಯ ಪದಕಗಳನ್ನೂ ಸಹ ನೀಡಿದರು. (ಇಬ್ಬರು ವಿದ್ಯಾರ್ಥಿಗಳು ಗೈರು ಹಾಜರಾಗಿದರು.)

ಈ ವೇದಶಾಲೆಯಲ್ಲಿ 264 ಮಂದಿ ಶಿಕ್ಷಣಾರ್ಥಿಗಳಿದ್ದಾರೆ. ಇವರೆಲ್ಲರಿಗೆ ಉಚಿತವಿದ್ಯೆ ಉಚಿತವಸತಿ, ವೈದ್ಯಸದುಪಾಯ, ತಿಂಗಳಿಗೆ ನೂರು ರೂಪಾಯಿಗಳ ವಿದ್ಯಾರ್ಥಿ ವೇತನವನ್ನು ತಿ.ತಿ.ದೇ. ನೀಡುತ್ತಿದೆ. ವೇದಗಳು 12 ವರ್ಷಗಳ ಅವಧಿಯದಾದರೆ, ಮಿಕ್ಕ ಅರ್ಚಕ, ಪೌರೋಹಿತ್ಯ ದಿವ್ಯಪ್ರಬಂಧಗಳ ಶಿಕ್ಷಣಾವಧಿ ಎಂಟುವರ್ಷಗಳು.









ಭಾನುವಾರದ ಕಾರ್ಯಕ್ರಮದಲ್ಲಿ ವೇದಪಾಠ ಶಾಲೆಯ ಪ್ರಾಂಶುಪಾಲ ಶ್ರೀ ವರದ ರಾಜಾನುಜಂ ಅವರು ಸಂಸ್ಕೃತದಲ್ಲಿ ರಾಷ್ಟ್ರಪತಿಗಳ ಬಗ್ಗೆ ಮಾತನಾಡಿದರು. ದೇವಾದಾಯ ಇಲಾಖಾ ಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ರಾಷ್ಟ್ರಪತಿಗಳಿಗೆ ಗೀತೋಪದೇಶದ ಜ್ಞಾಪಿಕೆಯನ್ನು ನೀಡಿದರು.

## ಮೂಲವರಿಗೆ ಭುಜಕೀರ್ತಿಗಳು

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಗೆ ಅಜ್ಞಾತ ಭಕ್ತರೊಬ್ಬರು ಭುಜಕೀರ್ತಿಗಳನ್ನು ಸಮರ್ಪಿಸಿದ್ದಾರೆ. ಒಂದೂವರೆ ಕಿಲೋಗ್ರಾಂ ತೂಕದ ಬಂಗಾರವನ್ನು ಹೊಂದಿದ ಈ ವಜ್ರಗಳನ್ನು ಹುದುಗಿಸಿದ ಭುಜಕೀರ್ತಿಗಳನ್ನು ತಯಾರಿಸಿದವರು ದೊಂಬಾಯಿನ ಝೂವೇರಿ ಅವರು. ಸುಮಾರು 30 ಲಕ್ಷ ರೂಪಾಯಿಗಳಿಗೂ ಮಿಕ್ಕಿದ ಬೆಲೆಯ ಈ ಭುಜಕೀರ್ತಿಗಳನ್ನು 14-10-95 ರ ವರೆಗೆ ತಿರುಪತಿಯ ಪರಿಪಾಲನಾ ಭವನದಲ್ಲಿ ಜನರ ವೀಕ್ಷಣೆಗಾಗಿ ಇಟ್ಟು ನಂತರ ತಿರುಮಲೆಗೆ ಸ್ವಾಮಿಯ ಅಲಂಕಾರಕ್ಕಾಗಿ ಸಾಗಿಸಲಾಗಿದೆ.

# ಹೆಚ್ಚಿನ ಯಾತ್ರಿಕ ಸಂಖ್ಯೆ, ಆದಾಯ.

ಬ್ರಹ್ಮೋತ್ಸವಗಳು ಮುಗಿದ ಮೇಲೂ ತಿರುಮಲೆಯಲ್ಲಿ ವಿಪರೀತ ರದ್ದಿಯಿದ್ದು ಅಕ್ಟೋಬರ್ ತಿಂಗಳ ಐದನೇ ತಾರೀಖಿನಿಂದ ಎಂಟನೇ ತಾರೀಖಿನವರೆಗೆ ನಾಲ್ಕು ದಿನಗಳಲ್ಲಿ ಮೂರು ಲಕ್ಷ ಹತ್ತು ಸಾವಿರಕ್ಕೂ ಹೆಚ್ಚು ಮಂದಿ ಸ್ವಾಮಿದರ್ಶನ ಪಡೆದರು. ಒಂದು ಕೋಟಿ ಐವತ್ತ ಮೂರು ಲಕ್ಷ ತೊಂಬತ್ತ ಮೂರು ಸಾವಿರಕ್ಕೂ ಮಿಕ್ಕಿದ ಆದಾಯವಾಯಿತು. ಇದರಿಂದಾಗಿ ಹೆಚ್ಚಿನ ಜನಸಂದಣಿಗೆ ದರ್ಶನಾವಕಾಶ ಒದಗಿಸುವಲ್ಲಿ ಅಧಿಕಾರಿಗಳು ಪೂರ್ಣ ಪ್ರಯತ್ನ ಮಾಡಿದರು. ರಾಷ್ಟ್ರಪತಿಗಳು ಆಲಯದಲ್ಲಿದ್ದಾಗಲೂ, ಪರಿಸ್ಥಿತಿಯನ್ನು ಅನುಸರಿಸಿ ದರ್ಶನಾವಕಾಶ ಕಲ್ಪಿಸಲಾಯಿತು. ಈ ವಿವರ ಪಟ್ಟಿ ಹೀಗಿದೆ---

| ದಿನಾಂಕ | ಹುಂಡಿ | ಅರ್ಜಿತಸೇವೆ | ಪ್ರಸಾದಗಳು | ಸರ್ವದರ್ಶನ | 30/- ರೂ. ಪ್ರವೇಶ | ಒಟ್ಟು ಜನ |
|---|---|---|---|---|---|---|
| 5-10-95 | 17,12,750 | 9,41,600 | 2,67,902 | 58,586 | 18,835 | 77,471 |
| 6-10-95 | 23,15,261 | 13,57,260 | 2,33,101 | 56,151 | 21,082 | 77,233 |
| 7-10-95 | 27,64,293 | 13,07,975 | 2,59,571 | 54,261 | 23,189 | 77,450 |
| 8-10-95 | 28,76,525 | 11,47,550 | 2,09,562 | 56,490 | 21,360 | 77,850 |
| ನಾಲ್ಕು ದಿನ | 96,68,829 | 47,54,385 | 9,70,137 | 2,25,488 | 84,516 | 3,10,004 |



ಶ್ರೀ ಪಿ. ಕೃಷ್ಣಮೂರ್ತಿ

## ಉತ್ತಮ ಉಪಾಧ್ಯಾಯ ಪ್ರಶಸ್ತಿ

ಆಂಧ್ರಪ್ರದೇಶ ಸರ್ಕಾರ 1995 ನೇ ಸಾಲಿನ ಉಪಾಧ್ಯಾಯ ದಿನವನ್ನು ಆಚರಿಸುವ ಅಂಗವಾಗಿ ಉತ್ತಮ ಉಪಾಧ್ಯಾಯ ಪ್ರಶಸ್ತಿಯನ್ನು ನೀಡುವಲ್ಲಿ ತಿ.ತಿ.ದೇ. ಶಾಲಾ ಕಾಲೇಜುಗಳ ನಾಲ್ಕು ಮಂದಿ ಉಪಾಧ್ಯಾಯರಿಗೆ ಉತ್ತಮ ಉಪಾಧ್ಯಾಯ ಪ್ರಶಸ್ತಿಯನ್ನು ಇದೇ ಸೆಪ್ಟಂಬರ್ ಐದರಂದು ನೀಡಿ ಗೌರವಿಸಿದೆ.

ತಿ.ತಿ.ದೇ.ಗಳ ಶ್ರೀ ಗೋವಿಂದರಾಜಸ್ವಾಮಿ ಆರ್ಟ್ಸ್‌ಕಾಲೇಜಿನ ಇತಿಹಾಸ ಅಧ್ಯಾಪಕ ಶ್ರೀ ಪಿ. ಕೃಷ್ಣಮೂರ್ತಿ ಚೆಟ್ಟಿ ಅವರ ಇಪ್ಪತ್ತೇಳು ವರ್ಷದ ಅಧ್ಯಯನ ಅಧ್ಯಾಪನ ಸೇವೆಯನ್ನು ಪರಿಗಣಿಸಿ ಅವರಿಗೆ ಉತ್ತಮ ಉಪಾಧ್ಯಾಯ ಪುರಸ್ಕಾರ ನೀಡಿದೆ. (ಅವರು ಇತಿಹಾಸದ ಉತ್ತಮ ಲೇಖಕರೂ ಹೌದು, ಅವರ ಅನೇಕ ಪುಸ್ತಕಗಳು ಪಠ್ಯಪುಸ್ತಕಗಳೂ ಆಗಿವೆ.) ಜೊತೆಗೇ ಪ್ರಶಸ್ತಿ ಪಡೆದ ಇತರ ಉಪಾಧ್ಯಾಯರೆಂದರೆ ಎಸ್.ವಿ. ಆರ್ಟ್ಸ್ ಕಾಲೇಜಿನ ತೆಲುಗು ಅಧ್ಯಾಪಕ ಶ್ರೀ ಮನ್ನವ ಭಾಸ್ಕರನಾಯುಡು, ಎಸ್.ಜಿ. ಆರ್ಟ್ಸ್ ಕಾಲೇಜಿನ ಇಂಗ್ಲ ಅಧ್ಯಾಪಕ ಶ್ರೀ ಕೆ. ಶ್ರೀನಿವಾಸಾಚಾರ್ಯುಲು ಹಾಗೂ ರಾಜ್ಯಶಾಸ್ತ್ರ ಅಧ್ಯಾಪಕ ಶ್ರೀ ಡಿ. ನರಸಿಂಹುಲು ಅವರುಗಳು.



ಶ್ರೀ ಕೆ. ಶ್ರೀನಿವಾಸಾಚಾರ್ಯುಲು.

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ — ಡಿಸೆಂಬರ್ 1995

**ನಾರಾಯಣದೇವರು :**

ವಿಷ್ಣುವನ್ನು ಯೋಗಿಹೃದ್‌ಭಾವಗಮ್ಯ ಎಂದರು. ಪುಲಸ್ತ್ಯ ಮಾರ್ಕಂಡೇಯ, ಶುಕ, ವಾಮದೇವ ಮೊದಲಾದ ಋಷಿಮುನಿಗಳು ನಾರಾಯಣನನ್ನು ಯಾವರೀತಿ ಕಂಡಿದ್ದಾರೆ ಎಂಬುದನ್ನು ವಿವರಿಸಿದ್ದಾರೆ, ಮಾಲೂರಿನ ಅಧ್ಯಾಪಕ ಶ್ರೀ ಆರ್. ಕೆ. ಗೋಪಾಲಕೃಷ್ಣ.

**ನಿಷ್ಕಾಮಕರ್ಮ :**

ಗೀತೆಯಲ್ಲಿ ನಿಷ್ಕಾಮಕರ್ಮವನ್ನು ಶ್ರೀಕೃಷ್ಣ ಪರಮಾತ್ಮ ಅರ್ಜುನನನ್ನು ನೆಪವಾಗಿಟ್ಟುಕೊಂಡು ಸರ್ವಕಾಲದ ಜನತೆಗೆ ಸಂದೇಶವಾಗಿ ನೀಡಿದ್ದಾನೆ. ಗೀತಾಜಯಂತಿಯ ಪ್ರಯುಕ್ತ ಗೀತೆಯ ಈ ಅಂಶವನ್ನು ಅವಧಾರಿಸಿ ವಿವರಿಸಿದ್ದಾರೆ, ಕಂದಾಡೈ ಕೇಶವನ್.

**ಸ್ವಾತಿ ತಿರುನಾಳ್ :**

ಭಾರತೀಯ - ಕರ್ನಾಟಕ ಸಂಗೀತದಲ್ಲಿ ದೊಡ್ಡ ಹೆಸರು ಮಹಾರಾಜ ಸ್ವಾತಿ ತಿರುನಾಳ್ ಅವರದ್ದು. ರಾಜ, ಕಲಾವಿದ, ಕಲಾಪೋಷಕ, ಆ ಹಿರಿಯ ಚೇತನದ ಜೀವನ ಸಾಧನೆಗಳನ್ನು ವಿವರಿಸಿದ್ದಾರೆ. ಎಂ. ಸಿ. ನರಸಿಂಹನ್.

**ಅತಿಥಿಯಜ್ಞ :**

ಭಾರತೀಯರಿಗೆಲ್ಲ ಪರಿಚಿತ ಶಬ್ದ - ವ್ಯಕ್ತಿ - ಅತಿಥಿ. ಅತಿಥಿ ದೇವೋಭವ ಎಂದೇ ಪ್ರೌಢವಾಕ್ಯ - ಪರಂಪರೆಯ ಧೋರಣೆ. ಅತಿಥಿಯಜ್ಞವನ್ನು ಅದರ ಸ್ಥೂಲ ಸೂಕ್ಷ್ಮಗಳನ್ನು ಸೋದಾಹರಣ ದೃಷ್ಟಾಂತಗಳಿಂದ ಕಣ್ಣಿಗೆ ಕಟ್ಟುತ್ತಾರೆ ವಿದ್ವಾನ್ ರಘುಸುತ.

**ಗಂಗಾನದಿ :**

ಗಂಗೆ ವಿಷ್ಣುಪಾದೋದ್ಭವೆ. ತ್ರಿಪಥಗಾ, ಅಮರಾಪಗಾ ಎಂದೆಲ್ಲ ಹೆಸರಾದವಳು. ಆಕೆಯ ದೇವತ್ವವನ್ನು ಕುರಿತು ವಿವರಿಸಿದ್ದಾರೆ ಅನಂತಚಿಂತಾಮಣಿ ಜ್ಯೋತಿಷೀ.

ಜೊತೆಗೇ ಇನ್ನು ಹಲವಾರು ಬೋಧಕ, ಧರ್ಮಪ್ರೇರಕ ಲೇಖನಗಳೊಂದಿಗೆ ಬಿಡುಗಡೆಯಾಗಲಿದೆ. ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.

**ಬಿಡಿ ಪ್ರತಿ - ರೂ. 2-00 ಮಾತ್ರ    ವಾರ್ಷಿಕ ಚಂದಾ ರೂ. 24-00**

ವಾರ್ಷಿಕ ಚಂದಾ ಹಣವನ್ನು - ಸಂಪಾದಕರು ತಿ.ತಿ.ದೇ. ತಿರುಪತಿ - ಇವರಿಗೆ ಎಂ.ಓ. / ಡಿ. ಡಿ.ಯ ಮೂಲಕ ಕಳುಹಿಸಬಹುದು.

# ತಿರುಮಲೆ ತಿರುಪತಿ ದೇವಸ್ಥಾನಗಳು

**ತಿರುಪತಿ**

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎಸ್. ರಮೇಶ್‌ಕುಮಾರ್, ಐ.ಎ.ಎಸ್.,**
**ಕಾರ್ಯನಿರ್ವಹಣಾಧಿಕಾರಿ.**

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದ ವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆ ಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹೂಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ; ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿ:
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿ:
—ಬೋಧಾಯನ ಧರ್ಮಸೂತ್ರ

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,
**ಎಸ್. ರಮೇಶ್‌ಕುಮಾರ್**



## ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ

**ಕಪಿಲತೀರ್ಥ, ತಿರುಪತಿ.**

ತಿರುಪತಿಯ ಕಪಿಲತೀರ್ಥದಲ್ಲಿರುವ
ಶ್ರೀ ಕಪಿಲೇಶ್ವರಸ್ವಾಮಿ
ದೇವಾಲಯದಲ್ಲಿ ಆಸ್ತಿಕ
ಭಕ್ತ ಪ್ರಯೋಜನಕ್ಕಾಗಿ—

**ನಿತ್ಯಾಭಿಷೇಕ ಸೇವೆ**

—ಏರ್ಪಡಿಸಲಾಗಿದೆ. ವರ್ಷಕ್ಕೆ ೪೨ ರೂಪಾಯಿ ಶುಲ್ಕ ಅಥವಾ ಒಂದೇ ಬಾರಿಗೆ ೫೦೦ ರೂಗಳ ಇಡುಗಂಟು ಹಾಗೂ ೪೨ ರೂಗಳ ಆರಂಭವರ್ಷದ ಶುಲ್ಕವನ್ನು ನೀಡುವುದರ ಮೂಲಕ ಈ ಸೇವೆಯನ್ನು ನಡೆಸಬಹುದಾಗಿದೆ. ವರ್ಷದಲ್ಲಿ ಎರಡು ಬಾರಿ ಇಬ್ಬರು ವಯಸ್ಕರನ್ನು ಈ ಸೇವೆಯ ಸಂದರ್ಶನಕ್ಕೆ ಅನುಮತಿಸಲಾಗುವುದು.

ಭಕ್ತರು ಈ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**



Published on behalf of T. T. Devasthanams by N. S. Ramamurthy, M.A., Editor and
Printed at T.T.D. Press by P. Mohan Rao, Manager, T.T.D. Press, Tirupati - 517 507

